ಪನ್ಯಾಸ
ಥಮಾಲೆ

೭೯

# ಯೋಜನೆಗಳಿಂದ ಕಲಿತ ಪಾಠಗಳು

ಡಿ. ವೆಂಕಟರಾವ್




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಿಶಂಬರ, ೧೯೭೩

ಉಪನ್ಯಾಸ ಗ್ರಂಥಮಾಲೆ

೧೭೯

# ಯೋಜನೆಗಳಿಂದ ಕಲಿತ ಪಾಠಗಳು

ಡಿ. ವೆಂಕಟರಾವ್




ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡ

ಡಿಸೆಂಬರ, ೧೯೭೩

ಪ್ರಕಾಶಕರು :
ಎಸ್. ಎಸ್. ಒಡೆಯರ, ಎಂ.ಎ.,ಎಲ್‌ಎಲ್.ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಡಿಶಂಬರ. ೧೯೭೩

ಪ್ರತಿಗಳು : ೫,೦೦೦



ಬೆಲೆ : ೨೫ ಪೈಸೆ

ಮುದ್ರಕರು :
**ಫ. ಶಿ. ಭಾಂಡಗೆ**
ವಿದ್ಯಾವಾಹಿನಿ ವಿದ್ಯುನ್ಮುದ್ರಣ (**ಪುಸ್ತಕ ವಿಭಾಗ**)
ಗಂಗಾಪೂರಪೇಟ, **ಗದಗ.**

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗು ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ "ಉಪನ್ಯಾಸ ಗ್ರಂಥಮಾಲೆ" ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗು ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗು ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೧೭೮ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನ-ಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೩
೨೧-೧೨-೧೯೭೩

ಎಂ. ಜಯಲಕ್ಷ್ಮಮ್ಮಣ್ಣಿ
ಕುಲಪತಿ

# ಲೇಖಕರ ಮಾತು

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಶಾಖೆಯ ೧೭೫ನೆಯ ಉಪನ್ಯಾಸ ಶಿಬಿರವು ವಿಜಾಪುರ ಜಿಲ್ಲೆಯ ಯಳವಾರ ಗ್ರಾಮದಲ್ಲಿ ೧೯೭೩ ರ ನವ್ಹಂಬರ ೧೪ ಮತ್ತು ೧೫ ನೆಯ ತಾರೀಖು ಸಾಂಗವಾಗಿ ನಡೆಯಿತು. ಅಲ್ಲಿಯ ಜನತೆಗೆ ಪಂಚವಾರ್ಷಿಕ ಯೋಜನೆಗಳ ಬಗ್ಗೆ ತಿಳುವಳಿಕೆ ನೀಡಲು ಉಪನ್ಯಾಸ ಮಾಡುವ ಸುಯೋಗವನ್ನು ನನಗೆ ಒದಗಿಸಿಕೊಡಲಾಯಿತು. ಆ ಭಾಷಣದ ವಿವರವು ಈಗ ಈ ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟವಾಗುತ್ತಿದೆ.

ಭಾರತ ವಿಶಾಲವಾದ ದೇಶ. ೧೯೪೭ ರಲ್ಲಿ ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿದರೂ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಲಿಲ್ಲ. ಇದುವರೆಗೂ ಆರ್ಥಿಕವಾಗಿ ಭಾರತ ಅನೇಕ ಸಮಸ್ಯೆಗಳನ್ನು ಎದುರಿಸುತ್ತಲೇ ಇದೆ. ಆರ್ಥಿಕ ಸ್ವಾತಂತ್ರ್ಯವಿಲ್ಲದ ಬರಿಯ ರಾಜಕೀಯ ಸ್ವಾತಂತ್ರ್ಯ ಕೇವಲ ತೋರಿಕೆಯ ಸ್ವಾತಂತ್ರ್ಯವಾಗುತ್ತದೆ. ಆದ್ದರಿಂದ ಆರ್ಥಿಕ ಸ್ವಾತಂತ್ರ್ಯವನ್ನು ಹೊಂದಲು ಕೈಗೊಂಡ ಒಂದು ದಿಟ್ಟ ಹೆಜ್ಜೆಯೇ ಪಂಚವಾರ್ಷಿಕ ಯೋಜನೆಗಳು. ದೀರ್ಘ ಮುಂಪರಿನಿಂದ ಎಚ್ಚೆತ್ತ ಸ್ವತಂತ್ರ ಭಾರತ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗಾಗಿ, ಆದರ್ಶ ಸಮಾಜ ಸ್ಥಾಪನೆಗಾಗಿ ಪಂಚವಾರ್ಷಿಕ

ಯೋಜನೆಗಳನ್ನು ಜಾರಿಗೆ ತಂದಿದೆ. ಇಂದು ಯೋಜನೆಗಳು ಭಾರತಕ್ಕೆ ರಕ್ತಗತವಾಗಿವೆ. ಯೋಜನೆಗಳು ನಾಡಿನ ಪ್ರಗತಿಯ ಪ್ರತೀಕವಾಗಿವೆ. ಒಂದು ರಾಷ್ಟ್ರದ ಪ್ರಗತಿಯ ಚಿಹ್ನೆಯಾಗಿದೆ. ಇಂದು ಯೋಜನೆಗಳು ಸರ್ವ ಅನಿಷ್ಟಗಳನ್ನು ಹೋಗಲಾಡಿಸುವ ಒಂದು ದಿವ್ಯ ಔಷಧಿಯಂತೆ, ಒಂದು ರಾಮಬಾಣವಿದ್ದಂತೆ ಎನ್ನಬಹುದು. ಯೋಜನೆಗಳು ಇಂದು ರಾಷ್ಟ್ರದ ಅಭ್ಯುದಯದಲ್ಲಿ ತಮ್ಮದೇ ಆದ ವಿಶಿಷ್ಟ ಪಾತ್ರ ಹೊಂದಿವೆ. ಆದರೆ ಕೆಲವು ಯೋಜನೆಗಳು ತಮ್ಮ ಭೌತಿಕ ಗುರಿಗಳನ್ನು (Physical targets) ಮುಟ್ಟುವುದರಲ್ಲಿ ವಿಫಲಗೊಂಡರೂ ಯೋಜನೆಗಳೇ ನಮ್ಮನ್ನು ಪ್ರಗತಿಯ ಹಾದಿಯಲ್ಲಿ ಕೊಂಡೊಯ್ಯುವ ಕೈದೀವಿಗೆ ಎನ್ನಬಹುದು. ಆದ್ದರಿಂದ ಯೋಜನೆಗಳ ಯಶಸ್ಸಿಗಾಗಿ ಜನರಲ್ಲಿ ಸರಿಯಾದ ತಿಳುವಳಿಕೆ, ಸದ್ಭಾವನೆ ಮೂಡುವಂತೆ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾದುದು ಅಗತ್ಯವಾಗಿದೆ. ಈ ದಿಸೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಯತ್ನ ನಿಜಕ್ಕೂ ಸ್ತುತ್ಯವಾದುದು.

ಇದು ವರೆಗಿನ ಯೋಜನೆಗಳಲ್ಲಿ ನಾವು ಎಲ್ಲಿ ಎಡವಿದ್ದೇವೆ; ಮುಂದೆ ಯಾವ ರೀತಿ ನಮ್ಮ ದೋಷಗಳನ್ನು ಸರಿಪಡಿಸಿಕೊಳ್ಳಬಹುದು ಎಂಬ ವಿಷಯಗಳ ಬಗ್ಗೆ ವಿವರಿಸಲು ನಾನು ಪ್ರಯತ್ನಿಸಿದ್ದೇನೆ ಅನೇಕ ಕ್ಲಿಷ್ಟವಾದ ವಿಷಯಗಳನ್ನು ಓದುಗರಿಗೆ ಅರ್ಥವಾಗುವಂತೆ ಸರಳ ರೀತಿಯಲ್ಲಿ ವಿವೇಚಿಸಲಾಗಿದೆ. ಈ ನನ್ನ ಕಿರುಹೊತ್ತಿಗೆಯಿಂದ ಓದುಗರು ಪ್ರಯೋಜನವನ್ನು ಪಡೆದರೆ ನನ್ನ ಶ್ರಮ ಸಾರ್ಥಕವಾದಂತೆ.

ಈ ಉಪನ್ಯಾಸವನ್ನು ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ ಮತ್ತು ವ್ಯಾಸಂಗವಿಸ್ತರಣ ಶಾಖೆಯ ನಿರ್ದೇಶಕರಿಗೂ ನನ್ನ ಕೃತಜ್ಞತೆಗಳು. ಈ ಕಿರುಹೊತ್ತಿಗೆಯನ್ನು ಬರೆಯುವ ಸಮಯದಲ್ಲಿ ನನ್ನೊಡನೆ ಸಹಕರಿಸಿದ ನನ್ನ ಪತ್ನಿ ಶ್ರೀಮತಿ ಚಂದ್ರಪ್ರಭಾ ಇವರಿಗೂ ನನ್ನ ಧನ್ಯವಾದಗಳು.

ಸರಕಾರಿ ಕಾಲೇಜು
ಸಿಂಧನೂರು
೨೨-೧೨-೧೯೬೩

ಡಿ. ವೆಂಕಟರಾವ್

# ಪರಿವಿಡಿ

# ೧. ಯೋಜನೆ ಎಂದರೇನು?

ಯೋಜನೆ ಎಂದರೆ ಆರ್ಥಿಕ ಚಟುವಟಿಕೆಗಳಲ್ಲಿ ನಿರತರಾಗಿ ಪ್ರಗತಿ ಸಾಧಿಸುವುದು. ಮನುಷ್ಯ ಆರ್ಥಿಕ ಚಟುವಟಿಕೆಗಳಲ್ಲಿ ಏಕೆ ನಿರತನಾಗಬೇಕು? ಮನುಷ್ಯ ತನ್ನ ಜೀವನದಲ್ಲಿ ಸಫಲತೆಯನ್ನು ಹೊಂದಬೇಕಾದರೆ, ಸುಖ-ಸಮೃದ್ಧಿಗಳನ್ನು ಪಡೆಯಬೇಕಾದರೆ ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸಬೇಕಾದುದು ಅವಶ್ಯ ಹಾಗೂ ಅನಿವಾರ್ಯ. ಮಾನವನ ಸುಖಕ್ಕೆ ಹಣವೇ ಮೂಲ. ಅವನ ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಹಣ ಹೆದ್ದಾರಿಯಾಗಿದೆ. ಆದ್ದರಿಂದ ಮಾನವನು ತನ್ನ ಜೀವನದ ಸಾಫಲ್ಯವನ್ನು ಪಡೆಯಲು ಆರ್ಥಿಕ ಚಟುವಟಿಕೆಗಳಲ್ಲಿ ನಿರತನಾಗಿ ಹಣವನ್ನು ಗಳಿಸುವನು. ಆ ರೀತಿ ಗಳಿಸಿದ ಹಣದಿಂದ ತನ್ನ ಬೇಡಿಕೆಗಳನ್ನು ಪೂರೈಸಿಕೊಂಡು ತೃಪ್ತಿಯನ್ನು ಪಡೆಯುವನು. ಉದಾಹರಣೆಗಾಗಿ, ರೈತ ಹೊಲವನ್ನು ಉಳುವುದರಲ್ಲಿ. ಡಾಕ್ಟರು ರೋಗಿಗಳನ್ನು ಪರೀಕ್ಷಿಸುವುದರಲ್ಲಿ, ಉಪಾಧ್ಯಾಯರು ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ಬೋಧಿಸುವುದರಲ್ಲಿ, ಆಫೀಸಿನಲ್ಲಿ ಗುಮಾಸ್ತ ಫೈಲುಗಳನ್ನು ನೋಡುವುದರಲ್ಲಿ ತಲ್ಲೀನರಾಗಿರುವರು. ಇವರೆಲ್ಲ ದುಡಿಯುವುದು ಹಣ ಗಳಿಸಲು. ಇವರೆಲ್ಲ ನಾನಾ ಬಗೆಯ ಚಟುವಟಿಕೆಗಳಲ್ಲಿ ನಿರತರಾಗಿ, ಹಣ ಪಡೆದು, ಆ ಹಣದಿಂದ

ವಸ್ತುಗಳನ್ನು ಮಾರುಕಟ್ಟೆಗಳಲ್ಲಿ ಕೊಳ್ಳುವುದರ ಮೂಲಕ ತಮ್ಮ ಇಚ್ಛೆಗಳನ್ನು ಪೂರೈಸಿಕೊಂಡು ಮಾನಸಿಕ ತೃಪ್ತಿಯನ್ನು ಪಡೆಯುವರು. ಇಂತಹ ಮಾನಸಿಕ ತೃಪ್ತಿಯನ್ನು ಪಡೆಯಲು ಆರ್ಥಿಕ ಒಲವು ಬಹುಮುಖ್ಯ. ಇಂದು ನಮ್ಮ ನಿತ್ಯ ಜೀವನದಲ್ಲಿ ಯೋಜನೆಗಳು ಹಾಸುಹೊಕ್ಕಾಗಿ ಬೆಳೆದಿವೆ. ಪ್ರತಿಯೊಬ್ಬ ಮಾನವನೂ ತನ್ನ ನಿತ್ಯಜೀವನದ ಕಾರ್ಯಗಳನ್ನು ಯೋಜನಾಪೂರ್ಣವಾಗಿ ನಿಯೋಜಿಸಿಕೊಂಡು ಅಚ್ಚುಕಟ್ಟಾಗಿ, ಕ್ರಮಬದ್ಧವಾಗಿ ಮಾಡುತ್ತಾನೆ. ಅಂದರೆ ಮಾನವ ತಾನು ಗಳಿಸಿದ ಹಣದಲ್ಲಿ ಯಾವ ಸಾಮಾನುಗಳನ್ನು ಎಷ್ಟು ಪ್ರಮಾಣದಲ್ಲಿ ಕೊಳ್ಳಬೇಕು; ಬಟ್ಟೆಗಾಗಿ, ವಿದ್ಯಾಭ್ಯಾಸಕ್ಕಾಗಿ, ಮನೋರಂಜನೆಗಾಗಿ ಇತ್ಯಾದಿಗಳಿಗೆ ಎಷ್ಟೆಷ್ಟು ಹಣವನ್ನು ವಿನಿಯೋಗಿಸಬೇಕು ಎಂಬುದನ್ನೆಲ್ಲಾ ಮೊದಲೇ ಯೋಚಿಸಿ ವ್ಯವಸ್ಥಿತ ರೀತಿಯಲ್ಲಿ ತನ್ನ ಕಾರ್ಯಗಳನ್ನು ಮಾಡುತ್ತಾನೆ. ಈ ವ್ಯವಸ್ಥಿತ ರೀತಿಯ ಕಾರ್ಯವೇ ಯೋಜನೆ.

ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಂಸಾರದ ಹಿತದ ದೃಷ್ಟಿಯಿಂದ ಪ್ರತಿಯೊಂದು ಕಾರ್ಯದಲ್ಲೂ ಯೋಜನಾಪೂರ್ಣವಾದ ಕಾರ್ಯ ಚಟುವಟಿಕೆಗಳು ಹೇಗೆ ಅಗತ್ಯವೋ ಹಾಗೆಯೇ ಒಂದು ದೇಶದ ಅಥವಾ ರಾಷ್ಟ್ರದ ಪ್ರಗತಿಯಾಗಬೇಕಾದರೆ ಯೋಜನೆಗಳು ಅವಶ್ಯಕ. ಆದರೆ ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೂ ಯಾವ ದೇಶವೂ ಯೋಜನೆಗೆ ಮಹತ್ವವನ್ನು ಕೊಟ್ಟಿರಲಿಲ್ಲ. ಆಗ ದೇಶಗಳು ಸ್ವತಂತ್ರ

ವಾಗಿ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ರಷ್ಯಾ ದೇಶವು ೧೯೧೭ ರಲ್ಲಿ ಮೊದಲ ಬಾರಿಗೆ ಹಸಿವು-ಬಡತನಗಳ ನಿರ್ಮೂಲನಕ್ಕಾಗಿ ಯೋಜನೆಯನ್ನು ಅನುಷ್ಠಾನಕ್ಕೆ ತಂದಿತು. ಇದರ ಯಶಸ್ಸು ಎಲ್ಲಾ ದೇಶಗಳನ್ನು ಆಕರ್ಷಿಸಿತು.

ನಂತರ ಇಪ್ಪತ್ತನೆಯ ಶತಮಾನದ ಮಧ್ಯ ಭಾಗದಿಂದ ಪ್ರಪಂಚದ ಎಲ್ಲಾ ರಾಷ್ಟ್ರಗಳಲ್ಲಿಯೂ 'ಯೋಜನೆ' ಎಂಬುದು ಸಂಪ್ರದಾಯವಾಗಿಬಿಟ್ಟಿತು. ಈಗ ಎಲ್ಲಾ ರಾಷ್ಟ್ರಗಳೂ ತಮ್ಮ ತಮ್ಮ ಆರ್ಥಿಕ ರೋಗಗಳನ್ನು ನಿವಾರಿಸಿಕೊಳ್ಳಲು ಯೋಜನಾಬದ್ಧ ಆರ್ಥಿಕ ವ್ಯವಸ್ಥೆಯನ್ನು ಜಾರಿಗೆ ತಂದಿವೆ. ನಾಡಿನ ಏಳಿಗೆಗಾಗಿ ಯೋಜನೆಯ ಉದಯವಾಗಿದೆ. ಜನ ಸಾಮಾನ್ಯರಿಗೆ ಉತ್ತಮ ರೀತಿಯಲ್ಲಿ ಬದುಕಿ ಬಾಳಲು ಅವ ಕಾಶ ಮಾಡಿಕೊಡಬೇಕೆಂಬುದೇ ಯೋಜನೆಯ ಮುಖ್ಯ ಗುರಿ. ಈ ಗುರಿಯನ್ನು ಕಾರ್ಯಗತಗೊಳಿಸಲೆಂದೇ ಯೋಜನೆಯು ರೂಪುಗೊಂಡಿದೆ. ಆದುದರಿಂದ ಯೋಜನೆಯು ಒಂದು ಸಾಧನೆ; ಆದರೆ ಗುರಿಯಲ್ಲ. ಹೇಗೆಂದರೆ ಆರ್ಥಿಕ ಅನಿಷ್ಟ ಗಳಿಗೆ ಯೋಜನೆಯು ಏಕಮೇವ ಪರಿಹಾರೋಪಾಯವಾಗಿದೆ ಎಂಬುದಾಗಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ನಿಶ್ಚಿತ ಅವಧಿಯಲ್ಲಿ ಸಾಧಿಸಬೇಕಾದ ಗುರಿಗಳನ್ನು ನಿಶ್ಚಯಿಸಿ, ಆ ಗುರಿಗಳನ್ನು ಹೊಂದುವ ಪ್ರಾಮಾಣಿಕ ಪ್ರಯತ್ನವೇ ಯೋಜನೆ. ದೇಶದ ಉತ್ಪಾದನೆಯ ಅಂಗಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ರಾಷ್ಟ್ರದ ಸರ್ವತೋಮುಖ ಪ್ರಗತಿ

ಸಾಧಿಸಿ ಜನರ ಜೀವನಮಟ್ಟವನ್ನು ಹೆಚ್ಚಿಸಲು ಕೈಗೊಳ್ಳುವ ಮುಂದಾಲೋಚನೆಯ ಮಾರ್ಗವೇ ಯೋಜನೆ. ಒಟ್ಟಿನಲ್ಲಿ ಹೇಳುವುದಾದರೆ ಕ್ರಮಬದ್ಧವಾಗಿ ಕಾರ್ಯಕ್ರಮಗಳನ್ನು ರೂಪಿಸಿ, ಸಾಧನ ಸಂಪತ್ತುಗಳನ್ನು ಮುಂದಾಲೋಚನೆಯಲ್ಲಿಟ್ಟುಕೊಂಡು ನಿಶ್ಚಿತ ಅವಧಿಯಲ್ಲಿ, ತ್ವರಿತ ವೇಗದಲ್ಲಿ ಬೆಳವಣಿಗೆಯನ್ನು ಹೊಂದುವ ಸಮಗ್ರ ಕಾರ್ಯಕ್ರಮವನ್ನು ಯೋಜನೆ ಎಂದು ಕರೆಯಬಹುದು.

/

# ೨. ಯೋಜನೆಗಳ ಅವಶ್ಯಕತೆ

ಭಾರತವು ಒಂದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ. ಭಾರತದಲ್ಲಿ ೧೯೫೧ ನೆಯ ಇಸವಿಯಿಂದ ಯೋಜನೆಗಳು ಕಾರ್ಯರೂಪಕ್ಕೆ ಬಂದು ದೇಶವನ್ನು ಪ್ರಗತಿಪಥದಲ್ಲಿ ಕೊಂಡೊಯ್ಯುತ್ತಿವೆ. ಇತ್ತೀಚೆಗೆ ಅನೇಕ ರಾಷ್ಟ್ರಗಳು ಆರ್ಥಿಕ ಯೋಜನೆಗೆ ಅತ್ಯಧಿಕ ಮಹತ್ವವನ್ನು ಕೊಟ್ಟಿವೆ. ಯೋಜನೆಯು ತನ್ನ ಧ್ಯೇಯ ಸಾಧನೆಗಾಗಿ ಕಾರ್ಯಕ್ಷೇತ್ರಕ್ಕಿಳಿದು ಆರ್ಥಿಕ ಚಟುವಟಿಕೆಗಳಲ್ಲಿ ನಿರತಗೊಂಡು ಯಶಸ್ಸನ್ನು ಹೊಂದುವುದು. ಒಂದು ನಾಡಿನ ಪ್ರಗತಿಯಾಗಬೇಕಾದರೆ, ನಾಡಿನ ಸಂಪತ್ತಿನ ಅಭಿವೃದ್ಧಿಯಾಗಬೇಕಾದರೆ ಯೋಜನೆಯು ಅತ್ಯಾವಶ್ಯಕ. ಯೋಜನೆಯಿಂದ ಉತ್ಪಾದನೆ ಹೆಚ್ಚುವುದು. ನಿರುದ್ಯೋಗ ಮತ್ತು ಬಡತನ ಕಡಿಮೆಯಾಗುವುದು. ಜನರಿಗೆ ಸಾಕಷ್ಟು ಆಹಾರ ಸಿಗುವುದಲ್ಲದೇ ಅವರು ಸಂತೃಪ್ತಿಯಿಂದ ಜೀವನ ನಡೆಸಬಹುದು. ಹಿಂದುಳಿದ ಆರ್ಥಿಕ ವ್ಯವಸ್ಥೆಗಳಲ್ಲಿ ಪ್ರಗತಿದಾಯಕ ಉದ್ದಿಮೆಗಳನ್ನು ಕಾರ್ಯರೂಪಕ್ಕೆ ತರಲು ಸಾಕಷ್ಟು ಬಂಡವಾಳವಿರುವುದಿಲ್ಲ ಸಾಧಾರಣವಾಗಿ ಹಿಂದುಳಿದಿರುವ ಎಲ್ಲಾ ರಾಷ್ಟ್ರಗಳಲ್ಲೂ ಬಂಡವಾಳದ ಕೊರತೆ ಇರುತ್ತದೆ. ಭಾರವಾದ ಯಂತ್ರ, ಉಕ್ಕು, ಭಾರವಾದ ವಿದ್ಯುತ್ ಸಲಕರಣೆಗಳು, ಸಾರಿಗೆ ಮುಂತಾದ ಆರ್ಥಿಕ ಚಟುವಟಿಕೆಗಳಲ್ಲಿ ಕೊರತೆ

ಕಂಡು ಬರುತ್ತದೆ. ಇಂತಹ ಸಂದರ್ಭಗಳಲ್ಲಿ ಬಂಡವಾಳ ಪೂರೈಸುವ ಶಕ್ತಿ ಖಾಸಗಿ ಉದ್ದಿಮೆದಾರರಿಗೆ ಇರುವುದಿಲ್ಲ. ಇಂತಹ ಆರ್ಥಿಕ ವ್ಯವಸ್ಥೆಯಲ್ಲಿನ ಕೊರತೆಯನ್ನು ಸರಿಪಡಿಸಲು ಸರಕಾರವು ಮುಂದೆ ಬಂದು ಆಸಕ್ತಿ ವಹಿಸಬೇಕಾಗುತ್ತದೆ. ಇದಕ್ಕಾಗಿ ಯೋಜನೆಯು ಅತ್ಯಾವಶ್ಯಕ. ಮುಂದೆ ವಿದೇಶಗಳಿಂದ ಹೊಸ ಯಂತ್ರಗಳನ್ನು ಪಡೆದು ಖಾಸಗಿ ಉದ್ದಿಮೆದಾರರಿಗೆ ದೊರಕಿಸಲು ಯೋಜನೆಯು ಅತ್ಯಾವಶ್ಯಕ. ಹಿಂದುಳಿದ ರಾಷ್ಟ್ರಗಳಲ್ಲಿ ರಾಷ್ಟ್ರೀಯ ವರಮಾನವನ್ನು ದ್ವಿಗುಣಗೊಳಿಸಲು ಯೋಜನೆಯು ಅತ್ಯಾವಶ್ಯಕ. ಮೇಲಾಗಿ ರಾಷ್ಟ್ರೀಯ ವರಮಾನವನ್ನು ಹೆಚ್ಚಿಸುವುದಲ್ಲದೆ ಅದರಿಂದ ವೈಯಕ್ತಿಕ ವರಮಾನವನ್ನು ಅಧಿಕಪಡಿಸಲೂ ಸಹ ಯೋಜನೆಯ ಅವಶ್ಯಕತೆ ಕಂಡುಬರುತ್ತದೆ. ರಾಷ್ಟ್ರದಲ್ಲಿ ಸುಖ, ಶಾಂತಿಗಳು ನೆಲೆಯೂರಬೇಕಾದರೆ, ದೇಶದ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ ಯೋಜನೆಗಳು ಬೇಕೇ ಬೇಕು. ಕೃಷಿ ರಂಗದಲ್ಲಿ ಕ್ರಾಂತಿಯನ್ನೆಬ್ಬಿಸಲು ಯೋಜನೆಯು ಅತ್ಯಾವಶ್ಯಕ. ಇದಲ್ಲದೆ ಸಾಮಾನ್ಯ ಜನರ ಶಿಕ್ಷಣ ಸಾಧಿಸಲು ಶಿಕ್ಷಣದ ಸೌಲಭ್ಯ, ಆರೋಗ್ಯ ವಸತಿಗಳನ್ನು ದೊರಕಿಸಲೂ ಸಹ ಯೋಜನೆಯು ಅವಶ್ಯಕ. ಈ ಎಲ್ಲಾ ಧೋರಣೆಗಳನ್ನು ಯೋಜನೆಗಳ ಮೂಲಕ ಪಡೆಯಲು ಎಲ್ಲ ಉತ್ಪಾದಕರು ಸರಕಾರದ ನಿರ್ದೇಶನದಂತೆ ಉತ್ಪಾದನೆಯ ಚಟುವಟಿಕೆಗಳಲ್ಲಿ ನಿರತರಾಗಬೇಕು.

ಭಾರತ ಸ್ವಾತಂತ್ರ್ಯ ಗಳಿಸುವ ವರೆಗೂ ಬ್ರಿಟಿಷರ ಆಳ್ವಿಕೆಯಲ್ಲಿದ್ದುದರಿಂದ ನಮ್ಮ ದೇಶದ ಆರ್ಥಿಕ ಪ್ರಗತಿಗೆ

ಬ್ರಿಟಿಷ್ ಸರಕಾರವು ಅಡಚಣೆಯಾಗಿತ್ತು. ೧೯೪೭ ರಲ್ಲಿ ಸ್ವಾತಂತ್ರ್ಯ ಗಳಿಸಿದ ನಂತರ ಪಾಕಿಸ್ತಾನ ಮತ್ತು ಭಾರತ ಗಳೆಂದು ಇಬ್ಭಾಗವಾಯಿತು. ಇದರಿಂದಾಗಿ ಭಾರತವು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಅವುಗಳಲ್ಲಿ ಮುಖ್ಯ ವಾದವುಗಳೆಂದರೆ ಆಹಾರ ಹಾಗೂ ಬಟ್ಟೆಯ ಕೊರತೆ. ಇತರ ದೇಶಗಳೊಂದಿಗೆ ಭಾರತವನ್ನು ಹೋಲಿಸಿದಾಗ ಎಲ್ಲಾ ಕ್ಷೇತ್ರ ಗಳಲ್ಲೂ ಭಾರತ ಹಿಂದುಳಿದಿತ್ತು. ಲಕ್ಷಗಟ್ಟಲೆ ಹಳ್ಳಿಗರು ಅನ್ಯಾಯುವಾದ ಭೂ ಪದ್ಧತಿಯಿಂದ ವಿಪರೀತ ಕಷ್ಟಕ್ಕೊಳಗಾಗಿ ದ್ದರು. ಬಡತನದ ತಾಂಡವ ನೃತ್ಯ ಎಲ್ಲೆಲ್ಲೂ ಪಾಶವೀ ಕೃತ್ಯಗಳನ್ನು ನಡೆಸಿತ್ತು. ಕೈಗಾರಿಕೆಗಳು ಅತಿ ಹೀನ ಸ್ಥಿತಿ ಯಲ್ಲಿದ್ದವು. ಅರ್ಥ ವ್ಯವಸ್ಥೆಯು ಬಹಳ ಕಾಲದಿಂದ ತಟಸ್ಥ ವಾಗಿತ್ತು. ಇದರ ಜೊತೆಗೆ ಇಂಗ್ಲೆಂಡಿನಲ್ಲಿ ಔದ್ಯೋಗಿಕ ಕ್ರಾಂತಿಯು ರೂಪುಗೊಂಡಿತು. ಇದರಿಂದ ಇಂಗ್ಲೆಂಡಿನ ಕಾರಖಾನೆಗಳಲ್ಲಿ ತಯಾರಾದ ವಸ್ತುಗಳಿಗೂ, ಭಾರತದಲ್ಲಿ ತಯಾರಾದ ವಸ್ತುಗಳಿಗೂ ಪೈಪೋಟಿ ಉಂಟಾಗಿ ಕೈಗಾರಿಕೆಯ ಉದ್ದಿಮೆಗಳಿಗೆ ಬಲವಾದ ಪೆಟ್ಟು ತಗುಲಿತು. ಇದರಿಂದಾಗಿ ಭಾರತೀಯರ ಆರ್ಥಿಕ ಸ್ವಾವಲಂಬನವು ಮುಗ್ಗರಿಸಿ ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಯಿತು. ಅನೇಕರು ನಿರುದ್ಯೋಗಿ ಗಳಾದರು. ಇದರಿಂದ ಕೃಷಿಯನ್ನವಲಂಬಿಸುವವರ ಸಂಖ್ಯೆಯು ಹೆಚ್ಚಾಯಿತು. ಜೀವನಮಟ್ಟವು ಇಳಿಮುಖವಾಗಲು ಪ್ರಾರಂಭ ವಾಯಿತು. ಜನರು ದಾರಿದ್ರ್ಯದಲ್ಲಿ ಜೀವನ ನಡೆಸಬೇಕಾ ಯಿತು. ಆದರೆ ಜನಸಂಖ್ಯೆಯು ಮಾತ್ರ ಭರದಿಂದ ಬೆಳೆಯು

ಲಾರಂಭಿಸಿತು. ಇದರಿಂದ ಕ್ಷಾಮ-ಡಾಮರಗಳು ಸಾಮಾನ್ಯವಾಗಿ ತಲೆದೋರುತ್ತಿದ್ದವು ಕ್ಷಾಮ–ಡಾಮರಗಳು ತಲೆದೋರಲು ಮುಖ್ಯ ಕಾರಣ ಪ್ರಕೃತಿಯ ವಿಕ್ರಮ ಪ್ರಕೋಪ, ಆಡಳಿತದಲ್ಲಿ ಅಲಕ್ಷ್ಯ, ಸಾರಿಗೆ ಸಂಚಾರದಲ್ಲಿ ಉಂಟಾದ ಅವ್ಯವಸ್ಥೆ ಮುಂತಾದುವು. ಸ್ವಾತಂತ್ರ್ಯ ಪ್ರಾಪ್ತಿಯ ವರ್ಷಗಳಲ್ಲಿ ಕೃಷಿರಂಗವು ಅನಿಶ್ಚಿತತೆಗಳ ಆಗರವಾಗಿತ್ತು. ಆಹಾರ ಧಾನ್ಯಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಈ ವಿಷಮ ಪರಿಸ್ಥಿತಿಯಲ್ಲಿ ಭಾರತದ ಅರ್ಥ ವ್ಯವಸ್ಥೆಯನ್ನು ಪುನರ್ ಘಟಿಸಲು ಶಿಕ್ಷಣ, ವೈದ್ಯಕೀಯ ಸಹಾಯ, ವಸತಿಯ ಸೌಕರ್ಯಗಳನ್ನು ಹೆಚ್ಚಿಸಲು, ಬಡತನ ಹಾಗೂ ಅದಕ್ಕೆ ಅಂಟಿಕೊಂಡಿರುವ ರೋಗರುಜಿನಗಳನ್ನು ಹೋಗಲಾಡಿಸಲು ರಾಷ್ಟ್ರೀಯ ಪ್ರಮಾಣದಲ್ಲಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದು ಅತ್ಯಗತ್ಯವಾಯಿತು. ಆದಾಗ್ಯೂ ಸರಕಾರವು ೧೯೫೦ ರ ವರೆಗೂ ದೇಶದ ಆರ್ಥಿಕ ಬೆಳವಣಿಗೆಯ ಕಡೆಗೆ ಗಮನಹರಿಸಲಿಲ್ಲ. ಕಾಲಕ್ರಮೇಣ ರಾಷ್ಟ್ರದ ನಾಯಕರಿಗೆ ಆರ್ಥಿಕ ಬೆಳವಣಿಗೆ ಹೊಂದಬೇಕಾದರೆ ರಾಷ್ಟ್ರೀಯ ಅಭಿವೃದ್ಧಿ ಕಾರ್ಯಗಳಲ್ಲಿ ಜನಶಕ್ತಿಯನ್ನು ಬಳಸಿಕೊಳ್ಳುವ ಮನವರಿಕೆಯಾಗಿ ೧೯೫೦ ರಲ್ಲಿ ಯೋಜನೆಗಳನ್ನು ಅನುಷ್ಠಾನಕ್ಕೆ ತಂದರು. ಅಂದರೆ ರಾಜಕೀಯ ಸ್ವಾತಂತ್ರ್ಯ ಗಳಿಸಿದ ಭಾರತ ಆರ್ಥಿಕ ಸ್ವಾತಂತ್ರ್ಯ ಗಳಿಸಲು ಯೋಜನೆಗಳನ್ನು ರೂಪಿಸಿತು. ಭಾರತದಲ್ಲಿ ನೈಸರ್ಗಿಕ ಸಂಪತ್ತು ಹೇರಳವಾಗಿದ್ದರೂ, ಆರ್ಥಿಕ ದೃಷ್ಟಿಯಿಂದ ಸರಿಯಾಗಿ ಉಪಯೋಗವಾಗುತ್ತಿರಲಿಲ್ಲ. ಪಾಶ್ಚಾತ್ಯ

ದೇಶದ ಕೆಲವರು ಭಾರತೀಯರನ್ನು 'ಧನಿಕ ದೇಶದ ದರಿದ್ರ'ರೆಂದು ಕರೆದಿರುವುದು ಈ ದೃಷ್ಟಿಯಿಂದಲೇ ಎಂದು ಹೇಳಬಹುದು. ಇದರಿಂದ ಸರಕಾರವು ಪ್ರತಿಯೊಬ್ಬ ಪೌರನ ಜೀವನಮಟ್ಟ ಹೆಚ್ಚಿಸಲು ಹಾಗೂ ರಾಷ್ಟ್ರದ ಸರ್ವತೋಮುಖ ಪ್ರಗತಿ ಹೊಂದಲು ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತಂದಿತು.

ಭಾರತದಲ್ಲಿ ಯೋಜನೆಯು ಎಲ್ಲಾ ಕ್ಷೇತ್ರಗಳಲ್ಲೂ-ಕೃಷಿ, ಔದ್ಯೋಗಿಕ ಕ್ಷೇತ್ರ, ಸಾರಿಗೆ ಮತ್ತು ಸಂಪರ್ಕ, ಬ್ಯಾಂಕಿಂಗ್, ವಿದೇಶಿ ವ್ಯಾಪಾರ ಮುಂತಾದವುಗಳಲ್ಲಿ ಆರ್ಥಿಕ ಅನಿಷ್ಟಗಳನ್ನು ತೊಲಗಿಸಿ ಹೆಚ್ಚಳವನ್ನು ಹೊಂದಲು ರೂಪುಗೊಂಡಿರುವ ಒಂದು ದಿವ್ಯ ಔಷಧ (Sovereign remedy). ರಾಜಕೀಯ ಸ್ವಾತಂತ್ರ್ಯ ಹೊಂದಿರುವ ಭಾರತ, ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯಗಳನ್ನು ಪಡೆದು ಸುಖ-ಸಮೃದ್ಧಿಗಳ ನಾಡಾಗುವ ಕನಸನ್ನು ನನಸಾಗಿ ಮಾಡಲು ಯೋಜನೆಯು ಹಾದಿ ಹಿಡಿದಿದೆ. ಅಭಿವೃದ್ಧಿ ಹೊಂದುತ್ತಿರುವ ಭಾರತದ ಆರ್ಥ ವ್ಯವಸ್ಥೆಯಲ್ಲಿ ಯೋಜನೆಗಳು ಮಹತ್ತರವಾದ ಪಾತ್ರ ವಹಿಸುತ್ತಿವೆ. ೧೯೫೦ ರಲ್ಲಿ ಯೋಜನೆಯು ಕಾರ್ಯರೂಪಕ್ಕೆ ಬಂದಾಗಿನಿಂದ ಆದ ಸಾಧನೆಗಳನ್ನು ಗಮನಿಸಿದರೆ ಯೋಜನೆಯು ರಾಷ್ಟ್ರದ ಪ್ರಗತಿ, ಅಭಿವೃದ್ಧಿಗಳಿಗಾಗಿ ಸಾಕಷ್ಟು ಸಹಾಯ ಸಲ್ಲಿಸಿದೆ ಎಂಬುದು ಕಂಡು ಬರುತ್ತದೆ. ಇದರಿಂದ ತಿಳಿದು ಬರುವುದೇನೆಂದರೆ ಯೋಜನೆಗಳು ಆರ್ಥಿಕ ಅಭಿ

ವೃದ್ಧಿಯನ್ನು ಶೀಘ್ರಗೊಳಿಸಲು ಅತ್ಯಾವಶ್ಯಕ. ಅದರಲ್ಲೂ ಹಿಂದುಳಿದ ರಾಷ್ಟ್ರಗಳ ಅಭಿವೃದ್ಧಿಗೆ ಯೋಜನೆಗಳ ಅಗತ್ಯ ಬಹಳವಾಗಿರುತ್ತದೆ. ಪ್ರಾಧ್ಯಾಪಕ ಆರ್ಥರ್ ಲೆವಿಸ್‌ರ ಮಾತು ಗಳಲ್ಲಿ ಹೇಳುವುದಾದರೆ ಹಿಂದುಳಿದ ರಾಷ್ಟ್ರಕ್ಕೆ ಯೋಜನೆಯು ಬಹುಮುಖ್ಯವಾಗಿದೆ. ಆದರೆ ಮುಂದುವರಿದ ರಾಷ್ಟ್ರಗಳಿಗಿಂತ ಹಿಂದುಳಿದ ರಾಷ್ಟ್ರಗಳಲ್ಲಿ ಯೋಜನೆಗಳನ್ನು ಕಾರ್ಯಗತಗೊಳಿ ಸುವುದು ಕಠಿಣವಾಗಿದೆ. ಭಾರತ ಹಿಂದುಳಿದ ರಾಷ್ಟ್ರವಾದರೂ ಯೋಜನೆಯೊಂದಿಗೆ ಮುಂದುವರಿಯುತ್ತಾ ರಾಷ್ಟ್ರದ ಮುನ್ನಡೆ ಗಾಗಿ ಶ್ರಮಿಸುತ್ತಿದೆ.

ಇಂದು ಭಾರತ ಸ್ವಾತಂತ್ರ್ಯ ಹೊಂದಿದ್ದರೂ ಸುಖ ಜೀವನ ನಡೆಸುತ್ತಿಲ್ಲ. ಭಾರತೀಯರು ಪಾರತಂತ್ರ್ಯ ಅಥವಾ ಗುಲಾಮಗಿರಿಯಿಂದ ಮುಕ್ತಿ ಹೊಂದಿದ್ದರೂ ಸಹ ಅವರು ನಮ್ಮ ಭೀಕರ ಶತ್ರುಗಳಾಗಿರುವ ಬಡತನ. ನಿರುದ್ಯೋಗ, ಅತಿ ಜನಸಂಖ್ಯೆ ಮುಂತಾದವುಗಳಿಂದ ಬಿಡುಗಡೆ ಹೊಂದಿಲ್ಲ. ಇಂದು ಭಾರತದಲ್ಲಿ ಜನಸಂಖ್ಯೆಯು ಭೀಕರವಾದ ರೂಪವನ್ನು ತಾಳಿ ಯೋಜನೆಗಳ ಪ್ರಗತಿಯನ್ನು ಕುಂಠಿತಗೊಳಿಸುತ್ತಿದೆ. ನಾವು ಸಂಪಾದಿಸಿದ ವಸ್ತುಗಳನ್ನು. ಹಣವನ್ನು ಕಳ್ಳನು ಒಂದೇ ರಾತ್ರಿ ದೋಚಿಕೊಂಡು ಹೋಗಿ ನಮ್ಮನ್ನು ಭಿಕಾರಿ ಗಳನ್ನಾಗಿ ಮಾಡುವಂತೆ ಜನಸಂಖ್ಯೆಯು ಯೋಜನೆಗಳಿಂದ ಎರಡು ದಶಕಗಳಲ್ಲಿ ಗಳಿಸಿದ ಫಲಗಳನ್ನು ಕೆಲವೇ ಕ್ಷಣಗಳಲ್ಲಿ ನಿರ್ಮೂಲ ಮಾಡುತ್ತದೆ. ಈ ಸಮಸ್ಯೆಯ ನಿವಾರಣೆಗೆ ಏಕೈಕ ಪರಿಹಾರವೆಂದರೆ ಅತಿ ಜನಸಂಖ್ಯೆಯನ್ನು ತಡೆಗಟ್ಟುವುದು. ಈ

ಕಾರ್ಯ ಯೋಜನೆಗಳಿಂದ ಮಾತ್ರ ಸಾಧ್ಯ. ನಮ್ಮ ಸಾಮಾಜಿಕ ಪದ್ಧತಿಗಳ ಹಾಗೂ ವ್ಯವಸ್ಥೆಗಳನ್ನು ಸುಧಾರಿಸಲು, ಹಳೆಯ ಪದ್ಧತಿಯ ಸಮಾಜ ಸ್ಥಾನದಲ್ಲಿ ಚೈತನ್ಯಪೂರ್ಣವಾದ ಸಮಾಜವನ್ನು ರಚಿಸಲು ಯೋಜನೆಗಳು ಅತ್ಯಾವಶ್ಯಕವಾಗಿವೆ.

ಭಾರತ ಹಳ್ಳಿಗಳಿಂದ ಕೂಡಿದ ದೇಶ. ಸುಮಾರು ೮೨% ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಅವರ ಮುಖ್ಯ ಕಸುಬು ವ್ಯವಸಾಯ. ಭಾರತದಲ್ಲಿ ವ್ಯವಸಾಯವು ಬಹಳ ಹಿಂದುಳಿದಿದೆ. ಹಿಂದೆ ಕೃಷಿಯು ಕೇವಲ ನೊಗ ಹಾಗೂ ಜೋಡೆತ್ತುಗಳಿಂದ ಕೂಡಿದ ಉದ್ದಿಮೆಯಾಗಿತ್ತು. ಆದರೆ ಇತ್ತೀಚೆಗೆ ಯೋಜನೆಗಳನ್ನು ಅನುಷ್ಠಾನಕ್ಕೆ ತಂದಾಗಿನಿಂದ ಕೃಷಿಯು ದೊಡ್ಡ ಉದ್ದಿಮೆಯಾಗಿ ರೂಪುಗೊಳ್ಳುತ್ತಿದೆ. ಈ ಯೋಜನೆಗಳ ಮುಖ್ಯಉದ್ದೇಶ ಗ್ರಾಮ ಭಾರತವನ್ನು ಉದ್ಧಾರಗೊಳಿಸುವುದು. ಏಕೆಂದರೆ ಗ್ರಾಮ ಭಾರತವೇ ನಿಜವಾದ ಭಾರತ. ಭಾರತದ ಯಶಸ್ಸು ಅಥವಾ ಪ್ರಗತಿಯು ಗ್ರಾಮಗಳ ಉದ್ಧಾರ ಅಥವಾ ಅಭ್ಯುದಯದ ಮೇಲೆ ನಿಂತಿದೆ. ಆದುದರಿಂದ ಪ್ರಕೃತಿ ಸಂಪತ್ತು, ಜನಶಕ್ತಿ ಹಾಗೂ ಬಂಡವಾಳವನ್ನು ಉಪಯೋಗಿಸಿಕೊಂಡು ಸರ್ವತೋಮುಖವಾದ ಅಭಿವೃದ್ಧಿಯನ್ನು ಸಾಧಿಸಲು ಭಾರತದಲ್ಲಿ ಕ್ರಮಬದ್ಧವಾದ ಯೋಜನೆಯು ಅತ್ಯಾವಶ್ಯಕವಾಗಿ ಬೇಕಾಗಿದೆ.

# ೩. ಭಾರತದಲ್ಲಿ ಯೋಜನೆಗಳ ಹುಟ್ಟು ಮತ್ತು ಐತಿಹಾಸಿಕ ಹಿನ್ನೆಲೆ

ಪ್ರಪಂಚದಲ್ಲಿ ಮೊಟ್ಟಮೊದಲಿಗೆ ಯೋಜನೆಗಳು ೧೯೧೭ ರಲ್ಲಿ ರೂಪುಗೊಂಡವು ಜಗತ್ತಿನಲ್ಲೇ ಪ್ರಥಮವಾಗಿ ಯೋಜನೆಗಳನ್ನು ಆರಂಭಿಸಿ ಆರ್ಥಿಕ ಪ್ರಗತಿಯನ್ನು ಪಡೆದ ಕೀರ್ತಿಯು ಸೋವಿಯತ್ ರಷ್ಯಾ ದೇಶಕ್ಕೆ ಸಲ್ಲುತ್ತದೆ. ಸೋವಿಯತ್ ರಷ್ಯಾ ದೇಶವು ಯೋಜನೆಗಳ ತವರೂರು. ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಮುನ್ನ ರಷ್ಯಾ ವ್ಯವಸಾಯ ಪ್ರಧಾನ ಪ್ರದೇಶವಾಗಿದ್ದು ಬಹಳ ಹಿಂದುಳಿದ ದೇಶವಾಗಿತ್ತು. ಹಸಿವು, ದಾರಿದ್ರ್ಯಗಳನ್ನು ಹೋಗಲಾಡಿಸುವ ಉದ್ದೇಶದಿಂದ ರಷ್ಯಾ ದೇಶವು ಅನೇಕ ಯೋಜನೆಗಳನ್ನು ಕಾರ್ಯಗತ ಮಾಡಿ ಪ್ರಗತಿಯನ್ನು ಹೊಂದಿತು. ರಷ್ಯಾ ದೇಶವು ಯೋಜನೆಗಳ ಮುಖಾಂತರ ತ್ವರಿತ ಗತಿಯಿಂದ ಪ್ರಗತಿಹೊಂದಿದ್ದರಿಂದ ಇತರ ದೇಶಗಳು ಆ ಕಡೆಗೆ ಗಮನ ನೀಡಿದವು. ಈ ದೇಶಗಳಲ್ಲಿ ಜನಜೀವನ ಸುಧಾರಿಸಲು ಹಾಗೂ ಪ್ರಗತಿಪಥದಲ್ಲಿ ಮುನ್ನಡೆಯುವ ಹಂಬಲವು ಮೂಡಿತು. ಇದರ ಪರಿಣಾಮವಾಗಿ ಇಂದು ಜಗತ್ತಿನಲ್ಲಿ ಪ್ರತಿಯೊಂದು ದೇಶದಲ್ಲಿಯೂ ಒಂದಿಲ್ಲೊಂದು ರೀತಿಯಲ್ಲಿ ಯೋಜನೆಗಳು ಕಾರ್ಯ ನಿರ್ವಹಿಸುತ್ತಿವೆ. ಉದಾಹರಣೆಗಾಗಿ ಚೀನಾ ದೇಶವು ಪಂಚವಾರ್ಷಿಕ

ಯೋಜನೆಗಳ ಮೂಲಕ ಪ್ರಗತಿಯನ್ನು ಸಾಧಿಸಿತು. ಇದರಂತೆಯೇ ಬ್ರಿಟನ್, ಅಮೇರಿಕಾ. ಸ್ವೀಡನ್. ಆಸ್ಟ್ರೇಲಿಯಾ. ಭಾರತ ದೇಶಗಳು ಯೋಜನೆಗಳನ್ನು ಅನುಷ್ಠಾನಕ್ಕೆ ತಂದವು.

ಭಾರತಕ್ಕೆ ಯೋಜನೆಗಳು ಹೊಸದೇನಲ್ಲ. ಸ್ವಾತಂತ್ರ್ಯ ಪೂರ್ವದಲ್ಲೇ ಯೋಜನೆಗಳ ಬಗ್ಗೆ ಜನರಲ್ಲಿ ಅನೇಕ ರೀತಿಯ ಕಲ್ಪನೆಗಳು ಮೂಡಿದ್ದವು. ಭಾರತದ ದಾರಿದ್ರ್ಯವನ್ನು ಹೋಗಲಾಡಿಸಿ ಜನರ ಜೀವನಮಟ್ಟ ಹೆಚ್ಚಿಸಲು ಯೋಜನೆಗಳ ಅವಶ್ಯಕತೆ ಇದೆ ಎಂಬುದನ್ನು ನಮ್ಮ ಮುಖಂಡರು ಸ್ವಾತಂತ್ರ್ಯ ಪೂರ್ವದಲ್ಲೇ ಮನಗಂಡಿದ್ದರು. ಆದರೆ ಭಾರತವು ಆಗಸ್ಟ್ ೧೫, ೧೯೪೭ ರ ವರೆಗೆ ವಿದೇಶಿಯರ ಆಡಳಿತದಲ್ಲಿದ್ದುದರಿಂದ ಅಲ್ಲಿಯವರೆಗೂ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದು ಅಸಾಧ್ಯವಾಗಿತ್ತು. ಏಕೆಂದರೆ ಬ್ರಿಟಿಷರಿಗೆ ನಮ್ಮನ್ನು ಪ್ರಗತಿಪಥದಲ್ಲಿ ಹಾಯಿಸುವುದು ಇಷ್ಟವಿರಲಿಲ್ಲ. ಅನಂತರ ೧೯೪೭ ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾಯಿತು. ನಂತರ ಭಾರತ ಸರಕಾರ 'ಯೋಜನಾ ಆಯೋಗ'ವನ್ನು ರಚಿಸಿತು.

ಸರ್ ಎಂ. ವಿಶ್ವೇಶ್ವರಯ್ಯನವರು ಭಾರತದ ಯೋಜನೆಗಳ ಪಿತಾಮಹ. ಯೋಜನೆಗಳ ಮೂಲಕ ದೇಶದ ಅಭಿವೃದ್ಧಿಯನ್ನು ಸಾಧಿಸುವ ಅವಶ್ಯಕತೆಯನ್ನು ಮೊದಲ ಬಾರಿಗೆ ಸರಕಾರದ ಹಾಗೂ ಜನರ ಮುಂದೆ ಮಂಡಿಸಿದ ಜ್ಞಾನಿ ಇವರು. ೧೯೩೧ ರಲ್ಲಿ ವಿಶ್ವೇಶ್ವರಯ್ಯನವರು ಯೋಜನೆಗಳ

ಪ್ರಾಮುಖ್ಯತೆಯ ಕಡೆಗೆ ರಾಷ್ಟ್ರದ ಗಮನವನ್ನು ಸೆಳೆದರು. ಅದೇ ವರ್ಷ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಯೋಜನೆಗಳ ಕಡೆಗೆ ತನ್ನ ಗಮನವನ್ನು ಹರಿಸಿತು. ವಿಶ್ವೇಶ್ವರಯ್ಯನವರು ೧೯೩೪ ರಲ್ಲಿ "ಭಾರತಕ್ಕೆ ಯೋಜನಾಬದ್ಧ ಆರ್ಥಿಕ ವ್ಯವಸ್ಥೆ" (Planned Economy for India) ಎಂಬ ಒಂದು ಪುಸ್ತಕ ಪ್ರಕಟಿಸಿ, ಭಾರತದ ಆರ್ಥಿಕ ವ್ಯವಸ್ಥೆಗೆ ೧೦ ವರ್ಷಗಳ ಯೋಜನೆಯು ಬೇಕೆಂದು ಅಭಿಪ್ರಾಯಪಟ್ಟರು. ಆದುದರಿಂದ ವಿಶ್ವೇಶ್ವರಯ್ಯನವರನ್ನು ಯೋಜನೆಯ ಪಿತಾಮಹರೆಂದು ಕರೆಯಬಹುದು. ಅನಂತರ ೧೯೩೮ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದ ಸುಭಾಷ್‌ಚಂದ್ರ ಬೋಸರು ರಾಷ್ಟ್ರೀಯ ಅಭಿವೃದ್ಧಿ ಸಮಿತಿಯನ್ನು ನೇಮಿಸಿದರು. ಈ ಸಮಿತಿಯು ಪಂಡಿತ ನೆಹರೂರವರ ಅಧ್ಯಕ್ಷತೆಯಲ್ಲಿ ಕೆಲಸ ಮಾಡಿ ೧೬ ವರದಿಗಳನ್ನು ಸಲ್ಲಿಸಿತು. ಇಷ್ಟು ಹೊತ್ತಿಗೆ ದ್ವಿತೀಯ ಮಹಾಯುದ್ಧವು ಪ್ರಾರಂಭವಾಗಿದ್ದರಿಂದ ಈ ಸಮಿತಿಯ ಶಿಫಾರಸುಗಳನ್ನು ಜಾರಿಗೆ ತರಲಾಗಲಿಲ್ಲ. ದ್ವಿತೀಯ ಮಹಾಯುದ್ಧವು ೧೯೪೫ ರಲ್ಲಿ ಕೊನೆಗೊಂಡ ನಂತರ ಬೊಂಬಾಯಿ ಯೋಜನೆ. ಗಾಂಧೀ ಯೋಜನೆ, ಜನತಾ ಯೋಜನೆ, ರಾಷ್ಟ್ರೀಯ ಆಯೋಜನಾ ಸಮಿತಿಯ ಯೋಜನೆ, ಬಿರ್ಲಾ ಯೋಜನೆ ಮುಂತಾದ ಯೋಜನೆಗಳು ಪ್ರಕಟಗೊಂಡವು. ಅನಂತರ ಈ ಎಲ್ಲ ಯೋಜನೆಗಳನ್ನು ಪರಿಶೀಲಿಸಿ ಪ್ರಥಮ ಪಂಚವಾರ್ಷಿಕ ಯೋಜನೆಯನ್ನು ಸರಕಾರವು ೧೯೫೦ ರಲ್ಲಿ ರೂಪಿಸಿತು.

ನಮ್ಮ ದೇಶ ಪ್ರಜಾಪ್ರಭುತ್ವದ್ದಾಗಿದೆ. ಪ್ರಜಾಪ್ರಭುತ್ವದಲ್ಲಿ ಯೋಜನೆಗಳು ಯಶಸ್ವಿಯಾಗಬೇಕಾದರೆ ಜನರ ಸಂಪೂರ್ಣ ಸಹಕಾರ ಅಗತ್ಯ. ಆದ್ದರಿಂದ ರಾಷ್ಟ್ರೀಯ ಯೋಜನೆಗಳ ಮೂಲಕ ಜನರ ಸಹಕಾರವನ್ನು ಹೆಚ್ಚಾಗಿ ಪಡೆಯುವ ಪ್ರಯತ್ನ ನಡೆದಿದೆ. ಈಗಾಗಲೇ ಭಾರತವು ಮೂರು ಪಂಚವಾರ್ಷಿಕ ಯೋಜನೆಗಳನ್ನು. ಮೂರು ವಾರ್ಷಿಕ ಯೋಜನೆಗಳನ್ನು ಮುಕ್ತಾಯಗೊಳಿಸಿ ನಾಲ್ಕನೆಯ ಯೋಜನೆಯ ಅಂತ್ಯದಲ್ಲಿದೆ. ಒಂದರ ನಂತರ ಒಂದರಂತೆ ಮೂರು ವಾರ್ಷಿಕ ಯೋಜನೆ (Annual Plans) ಗಳನ್ನು ಕಾರ್ಯಗತ ಮಾಡಿದ ನಂತರ ನಾಲ್ಕನೆಯ ಯೋಜನೆಯ ಅಂಕಿ–ಸಂಖ್ಯೆಗಳನ್ನು ಸಿದ್ಧಗೊಳಿಸಲಾಯಿತು. ನಾಲ್ಕನೆಯ ಯೋಜನೆಯನ್ನು ಐದನೆಯ ಯೋಜನೆಯು ಅನುಸರಿಸುವುದು. ಈಗಾಗಲೇ ಐದನೆಯ ಯೋಜನೆಗೆ (೧೯೭೪–೧೯೭೯) ಪಾರ್ಲಿಮೆಂಟ್ ೫೦.೧೬೫ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲು ತನ್ನ ಅನುಮತಿ ನೀಡಿದೆ. ಮುಂದೆ ಆರನೆಯ ಯೋಜನೆಯು ಐದನೆಯ ಯೋಜನೆಯನ್ನು ಅನುಸರಿಸುವುದು. ಏಕೆಂದರೆ ನಮ್ಮ ಗುರಿಗಳನ್ನು ತಲಪುವ ವರೆಗೆ ನಾವು ಯೋಜನೆಗಳನ್ನು ನಿಲ್ಲಿಸಲು ಸಾಧ್ಯವಿಲ್ಲ. ಇದೊಂದು ಮುಂದುವರಿಯುತ್ತಿರುವ ವಿಧಾನ. ಒಟ್ಟಿನಲ್ಲಿ ಭಾರತದಲ್ಲಿ ಯೋಜನೆಗಳು ರೂಪುಗೊಳ್ಳಲು ತಮ್ಮದೇ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿವೆ ಎನ್ನಬಹುದು.

# ೪. ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಸಾಧಿಸಿದ ಪ್ರಗತಿ

## ಪ್ರಥಮ ಪಂಚವಾರ್ಷಿಕ ಯೋಜನೆ ೧೯೫೧—೧೯೫೬

ಭಾರತವು ಬ್ರಿಟಿಷರ ದಾಸ್ಯದಿಂದ ೧೫ ನೇ ಆಗಸ್ಟ್ ೧೯೪೭ ರಲ್ಲಿ ವಿಮುಕ್ತಿ ಪಡೆದು ಸ್ವಾತಂತ್ರ್ಯದ ಜಯಮಾಲೆ ಧರಿಸಿ ತನ್ನ ಚರಿತ್ರೆಯಲ್ಲಿ ಒಂದು ಅಧ್ಯಾಯವನ್ನು ಪರಿಸಮಾಪ್ತಿಗೊಳಿಸಿ ಮತ್ತೊಂದು ಅಧ್ಯಾಯವನ್ನು ತೆರೆಯಿತು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ತಾವು ಹೂಡಿದ ಚಳುವಳಿಯು ಮುಕ್ತಾಯಗೊಂಡು ಅದರೊಂದಿಗೆ ರಾಷ್ಟ್ರೀಯ ಅಭಿವೃದ್ಧಿಯನ್ನು ಹೊಂದಲು "ಪಂಚವಾರ್ಷಿಕ ಯೋಜನೆ"ಗಳೆಂಬ ಮಹತ್ಕಾರ್ಯವು ಆರಂಭಗೊಂಡು ಭಾರತದ ಆರ್ಥಿಕ ಸ್ವಾತಂತ್ರ್ಯ ಸಾಧನೆಗೆ ಕೈಹಾಕಿತು. ಏಕೆಂದರೆ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯಕ್ಕೆ ಏನೂ ಅರ್ಥವಿಲ್ಲ. ರಾಜಕೀಯ ಸ್ವಾತಂತ್ರ್ಯವು ಆರ್ಥಿಕ ಸ್ವಾತಂತ್ರ್ಯ ಹೊಂದಲು ಕೇವಲ ಒಂದು ಸಾಧನವಾಗಿದೆ. ಈ ಸಾಧನವನ್ನು ಬಳಸಿಕೊಂಡು ದೇಶದ ಅಭಿವೃದ್ಧಿಯನ್ನು ಪಡೆಯಬಹುದು. ಆದ್ದರಿಂದ ಆರ್ಥಿಕವಾಗಿ ಸ್ವಾತಂತ್ರ್ಯ ಪಡೆದಲ್ಲದೆ ಬರಿಯ ರಾಜಕೀಯ ಸ್ವಾತಂತ್ರ್ಯದಿಂದ ರಾಷ್ಟ್ರಕ್ಕೆ ಯಾವ ರೀತಿಯ ಪ್ರಯೋಜನವೂ ಇಲ್ಲ ಎಂಬುದು ಸರಕಾರಕ್ಕೆ ಮನವರಿಕೆಯಾಗಿ ಅದು ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ

ಕಾರ್ಯರೂಪಕ್ಕೆ ತಂದು ಆರ್ಥಿಕ ಸ್ವಾತಂತ್ರ್ಯ ಪಡೆಯಲು ನಿರ್ಧರಿಸಿತು.

ಯೋಜನೆಗಳನ್ನು ರೂಪಿಸಲು ಸರಕಾರವು ೧೯೫೦ ರಲ್ಲಿ ಯೋಜನಾ ಆಯೋಗವನ್ನು ಸ್ಥಾಪಿಸಿತು (Planning Committee). ಪ್ರಧಾನ ಮಂತ್ರಿ ದಿವಂಗತ ನೆಹರೂರವರ ನೇತೃತ್ವದಲ್ಲಿ ಪ್ರಥಮ ಪಂಚವಾರ್ಷಿಕ ಯೋಜನೆಯು ರೂಪಿಸಲ್ಪಟ್ಟು ೧೯೫೧ ರಲ್ಲಿ ಕಾರ್ಯಾರಂಭವಾಯಿತು.

ಭಾರತ ಕೃಷಿ ಪ್ರಧಾನ ದೇಶವಾಗಿದ್ದು ಶೇ. ೮೨ ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಅವರು ಕೃಷಿಯನ್ನೇ ಮುಖ್ಯ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಆದರೆ ಕೃಷಿಯನ್ನು ಪ್ರಧಾನ ಉದ್ದಿಮೆಯನ್ನಾಗಿ ಅವಲಂಬಿಸಿದ್ದರೂ, ಭಾರತ ತನ್ನ ಜನತೆಗೆ ಸಾಕಷ್ಟು ಆಹಾರವನ್ನು ಉತ್ಪಾದಿಸಲಾಗದೆ ವಿದೇಶಗಳಿಂದ ಬರುವ ಆಮದಿನ ಕಡೆ ಕೈಚಾಚುತ್ತಿದೆ ಇದರಿಂದ ಭಾರತ ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಆಹಾರದ ಸಮಸ್ಯೆ ಬೃಹದಾಕಾರವಾಗಿ ತನ್ನ ತೋಳುಗಳನ್ನು ಚಾಚಿರುವುದು ನಮಗೆ ಕಂಡು ಬರುತ್ತದೆ. ಹಿಂದುಸ್ತಾನದ ವಿಭಜನೆಯಾದ ನಂತರ, ಈ ಸಮಸ್ಯೆ ಮತ್ತಷ್ಟು ಉಲ್ಬಣಗೊಂಡಿತು. ಆಗ ಭಾರತದ ಪಾಲಿಗೆ ೧೦೦ ರಲ್ಲಿ ೮೧ ರಷ್ಟು ಜನರಿದ್ದು ಶೇಕಡ ೬೯ ರಷ್ಟು ಭತ್ತ ಬೆಳೆಯುವ ೬೬% ಗೋಧಿ ಬೆಳೆಯುವ ಭೂಮಿ ಮಾತ್ರ ದೊರೆಯಿತು.

ಹೀಗಾಗಿ ಭಾರತ ಆಹಾರ ಧಾನ್ಯಗಳ ಬಗ್ಗೆ ಸ್ವಾವಲಂಬನೆ ಹೊಂದುವುದು ಬಹಳ ಅವಶ್ಯಕವಾಯಿತು. ಆದ್ದರಿಂದ ಮೊದಲನೆಯ ಯೋಜನೆಯಲ್ಲಿ ಕೃಷಿರಂಗಕ್ಕೆ ಆದ್ಯತೆ ನೀಡಲಾಯಿತು. ರಾಷ್ಟ್ರದ ಆರ್ಥಿಕ ವ್ಯವಸ್ಥೆಯು ಸಮತೋಲನವನ್ನು ಕಾಪಾಡುವುದಕ್ಕಾಗಿ ಆದ್ಯತೆಗಳ (Priorities) ಯೋಜನೆಯೊಂದನ್ನು ತಯಾರಿಸಿ ದೇಶದ ವ್ಯವಸ್ಥಿತ ಅಭಿವೃದ್ಧಿಗೆ ತಕ್ಕ ಅಡಿಪಾಯ ಹಾಕಲು ಮೊದಲನೆಯ ಯೋಜನೆಯಲ್ಲಿ ನಿರ್ಧರಿಸಲಾಯಿತು.ಆಗಿನ ಪರಿಸ್ಥಿತಿಗನುಗುಣವಾಗಿ ಕೆಲವೊಂದು ಕಾರ್ಯಕ್ರಮಗಳಿಗೆ ಪ್ರಾಶಸ್ತ್ಯ ಕೊಡಲಾಯಿತು. ಆಗಿದ್ದ ಮುಖ್ಯ ಪ್ರಶ್ನೆಗಳೆಂದರೆ ಆಹಾರದ ಕೊರತೆ, ಉದ್ದಿಮೆಗಳಿಗೆ ಬೇಕಾದ ಕಚ್ಚಾಮಾಲುಗಳ ಕೊರತೆ, ಏರುತ್ತಿರುವ ಬೆಲೆಗಳು, ನಿರಾಶ್ರಿತರ ಮರುವಸತಿಯ ಪ್ರಶ್ನೆ ಇತ್ಯಾದಿ. ಈ ಎಲ್ಲಾ ಸಮಸ್ಯೆಗಳಿಗೂ ಪರಿಹಾರವನ್ನು ಮೊದಲನೆಯ ಯೋಜನೆಯಲ್ಲಿ ಒದಗಿಸಲು ನಿರ್ಧರಿಸಲಾಯಿತು.

ಈ ಯೋಜನೆಯು ಹಲವಾರು ಉದ್ದೇಶಗಳನ್ನು ಹೊಂದಿತ್ತು. ದ್ವಿತೀಯ ಮಹಾಯುದ್ಧದಿಂದ ಹಾಗೂ ರಾಷ್ಟ್ರದ ವಿಭಜನೆಯಿಂದ ತೊಂದರೆಗೀಡಾಗಿದ್ದ ಭಾರತದ ಅರ್ಥ ವ್ಯವಸ್ಥೆಯನ್ನು ಪುನರ್ ರಚಿಸುವುದು, ಹಣದ ಅತಿ ಪ್ರಸರಣವನ್ನು ತಡೆಗಟ್ಟುವುದು. ಸಾರಿಗೆ ಸಂಪರ್ಕಗಳ ನಿರ್ಮಾಣ. ಆಹಾರ ಧಾನ್ಯಗಳಲ್ಲಿ ಸ್ವಾವಲಂಬನೆ ಹೊಂದುವುದು, ಪಾಕಿಸ್ತಾನದಿಂದ ಬಂದ ನಿರಾಶ್ರಿತರನ್ನು ಪುನರ್‌ನಿವೇಶನಗೊಳಿಸುವುದು, ದೇಶವಲ್ಲಿ ಏರುತ್ತಿರುವ ಬೆಲೆ

ಗಳನ್ನು ತಡೆದು ಗ್ರಾಹಕರಿಗೆ ಕಡಿಮೆ ಬೆಲೆಗೆ ಹೆಚ್ಚು ಸಾಮಾನು ಗಳನ್ನು ಒದಗಿಸುವುದು ಇತ್ಯಾದಿ.

ಈ ಉದ್ದೇಶಗಳನ್ನು ಸಾಧಿಸಲು ಆಹಾರ ಧಾನ್ಯಗಳನ್ನು ಮತ್ತು ಕಚ್ಚಾ ಪದಾರ್ಥಗಳನ್ನು ಉತ್ಪಾದಿಸಿ ನಿರಾಶ್ರಿತರಿಗೆ ಸೌಲಭ್ಯಗಳನ್ನು ಒದಗಿಸುವ ಕಾರ್ಯಕ್ರಮಗಳಿಗೆ ಈ ಅವಧಿ ಯಲ್ಲಿ ಹೆಚ್ಚಿನ ಆದ್ಯತೆಯನ್ನು ಕೊಡಲಾಯಿತು. ರಸ್ತೆ ಮತ್ತು ರೇಲ್ವೆ ಸಾಗಾಣಿಕೆ, ನೀರಾವರಿಯ ಸೌಕರ್ಯಗಳು ವಿದ್ಯುಚ್ಛ ಕ್ತಿಯ ಉತ್ಪಾದನೆ ಮುಂತಾದ ಅಭಿವೃದ್ಧಿ ಕಾರ್ಯಗಳಿಗೆ ಸಾಕಷ್ಟು ಗಮನವನ್ನು ಈ ಯೋಜನೆಯಲ್ಲಿ ಕೊಡಲಾಯಿತು. ಈ ಕಾರ್ಯಕ್ರಮಗಳು ರಾಷ್ಟ್ರೀಯ ವರಮಾನವನ್ನು ಶೇಕಡ ೧೧ ರಷ್ಟು ಹೆಚ್ಚಿಸುತ್ತವೆಂದು ನಿರೀಕ್ಷಿಸಲಾಗಿತ್ತು. ಅದಕ್ಕೆ ತಕ್ಕಂತೆ ಈ ಯೋಜನೆಯಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ನಿರೀಕ್ಷಿ ಸಿದ್ದ ಮಟ್ಟಕ್ಕಿಂತಲೂ ಹೆಚ್ಚು ಪ್ರಗತಿಯನ್ನು ಹೊಂದ ಲಾಯಿತು.

## ವೆಚ್ಚಮಾಡಿದ ಹಣದ ಗಾತ್ರ :

ಈ ಯೋಜನಾವಧಿಯಲ್ಲಿ ಕೃಷಿ, ನೀರಾವರಿ, ವಿದ್ಯುತ್ ಶಕ್ತಿಗಳ ಪೂರೈಕೆಗೆ ವಿಶೇಷ ಪ್ರಾಶಸ್ತ್ಯ ಕೊಡಲಾಯಿತು. ಮೊದಲನೆಯ ಯೋಜನೆಯ ಗಾತ್ರ ೩೩೫೬ ಕೋಟಿ ರೂ.ಗಳು. ಖಾಸಗಿ ಕ್ಷೇತ್ರದಲ್ಲಿ ವಿವಿಧ ಉದ್ದಿಮೆಗಳ ಬೆಳವಣಿಗೆಗಾಗಿ ೧೫೦೦ ಕೋಟಿ ರೂ.ಗಳನ್ನು ವೆಚ್ಚಮಾಡಲಾಯಿತು. ಸರಕಾರಿ ರಂಗದಲ್ಲಿ ೨೦೬೯ ಕೋಟಿ ರೂ.ಗಳನ್ನು ವೆಚ್ಚಮಾಡಲು ನಿರ್ಧ

ರಿಸಲಾಯಿತು. ಈ ಹಣದಲ್ಲಿ ೩೫೭ ಕೋಟಿ ರೂ.ಗಳನ್ನು ಕೃಷಿ ಹಾಗೂ ಸಾಮಾಜಿಕ ಅಭಿವೃದ್ಧಿ ಕಾರ್ಯಗಳಿಗಾಗಿ ಮೀಸಲಾಗಿಡಲಾಗಿತ್ತು. ಈ ಕ್ಷೇತ್ರದಲ್ಲಾದ ಗಮನಾರ್ಹ ಪ್ರಗತಿಯು ದೇಶದ ಆರ್ಥಿಕ ಸ್ಥಿತಿಯನ್ನು ಪುರಸ್ಕರಿಸಲು ಪೋಷಕವಾಗಿ ದ್ವಿತೀಯ ಯೋಜನೆಯ ಪ್ರಗತಿಯನ್ನು ಹೆಚ್ಚಿಸಲು ಎಡೆಮಾಡಿಕೊಟ್ಟಿತು. ಸಾರ್ವಜನಿಕ ವಲಯದಲ್ಲಿ ಅಂತಿಮವಾಗಿ ಅಭಿವೃದ್ಧಿ ಕಾರ್ಯಗಳಿಗಾಗಿ ೨೩೫೬ ಕೋಟಿ ರೂ. ವೆಚ್ಚಮಾಡಲು ನಿರ್ಧರಿಸಿತು. ಆದರೆ ವಾಸ್ತವವಾಗಿ ಅಭಿವೃದ್ಧಿ ಕಾರ್ಯಗಳಿಗಾಗಿ ೧೬೬೦ ಕೋಟಿ ರೂ. ವೆಚ್ಚಮಾಡಲಾಯಿತು.

ಈ ಯೋಜನೆಯಲ್ಲಿ ನಾನಾ ಕ್ಷೇತ್ರಗಳ ಅಭಿವೃದ್ಧಿಗಾಗಿ ವೆಚ್ಚ ಮಾಡಿದ ಹಣ :

| | ವಿವರ | ವ್ಯಯ (೧೯೫೧–೫೬) | | |
|---|---|---|---|---|
| ೧ | ಕೃಷಿ ಮತ್ತು ಸಾಮಾಜಿಕ ಅಭಿವೃದ್ಧಿ | ೩೬೧ | ಕೋಟಿ | ರೂ.ಗಳು |
| ೨ | ನೀರಾವರಿ ಮತ್ತು ವಿದ್ಯುಚ್ಛಕ್ತಿ | ೫೬೧ | ,, | ,, |
| ೩ | ಸಾರಿಗೆ ಮತ್ತು ಸಂಪರ್ಕ | ೪೯೭ | ,, | ,, |
| ೪ | ಉದ್ದಿಮೆಗಳು | ೧೭೩ | ,, | ,, |
| ೫ | ಸಾಮಾಜಿಕ ಸೇವೆ | ೩೪೦ | ,, | ,, |
| ೬ | ಪುನರ್‍ವಸತಿ | ೮೫ | ,, | ,, |
| ೭ | ಇತರ ಬಾಬ್ತುಗಳಿಗಾಗಿ | ೫೨ | ,, | ,, |
| | ಒಟ್ಟು | ೨೦೬೯ | ಕೋಟಿ | ರೂ.ಗಳು. |

ಮೇಲಿನ ಹಣದ ಹಂಚಿಕೆಯಿಂದ ತಿಳಿದುಬರುವುದೇನೆಂದರೆ ಮೊದಲನೆಯ ಯೋಜನಾವಧಿಯಲ್ಲಿ ಕೃಷಿ ಬೆಳವಣಿಗೆಗೆ

ಪ್ರಾಶಸ್ತ್ಯವನ್ನಿತ್ತು ಅಧಿಕ ಹಣವನ್ನು ನೀರಾವರಿಗಾಗಿ ವೆಚ್ಚ ಮಾಡಲು ಆದಿರಿಸಲಾಯಿತು. ಸಾರಿಗೆ ಸಂಪರ್ಕಗಳು ಯುದ್ಧದಿಂದ ಅಸ್ತವ್ಯಸ್ತವಾಗಿದ್ದರಿಂದ ಅವುಗಳ ಅಭಿವೃದ್ಧಿಗಾಗಿ ಸ್ವಲ್ಪ ಹಣವನ್ನು ಉದ್ದಿಮೆಗಳ ನಿರ್ಮಾಣಕ್ಕೆ ಮತ್ತು ಸಾಮಾಜಿಕ ಸೇವೆಗಳಿಗಾಗಿ ವೆಚ್ಚ ಮಾಡಲಾಯಿತು.

**ಗುರಿಗಳು :**

ಮೊದಲನೆಯ ಯೋಜನೆಯಲ್ಲಿ ೨೦೬೯ ಕೋಟಿ ರೂ.ಗಳನ್ನು ಸಾರ್ವಜನಿಕ ಕ್ಷೇತ್ರದಲ್ಲಿ ವೆಚ್ಚ ಮಾಡಲು ನಿರ್ಧರಿಸಿ ಆಹಾರ ಧಾನ್ಯಗಳು, ಎಣ್ಣೆ ಬೀಜಗಳು. ಹತ್ತಿ, ಕಬ್ಬು. ಸಣಬು ಮುಂತಾದ ಪದಾರ್ಥಗಳಲ್ಲಿ ಹೆಚ್ಚಿನ ಉತ್ಪನ್ನವನ್ನು ಪಡೆಯುವ ಗುರಿಯನ್ನು ಹೊಂದಲಾಗಿತ್ತು. ಯೋಜಕರು ನಿರೀಕ್ಷಿಸಿದ್ದಂತೆಯೇ ಅನೇಕ ಪದಾರ್ಥಗಳ ಉತ್ಪಾದನೆಯಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟಿದ್ದಲ್ಲದೆ, ಕೆಲವು ಪದಾರ್ಥಗಳ ಉತ್ಪಾದನೆಯಲ್ಲಿ ಗೊತ್ತುಪಡಿಸಿದ ಗುರಿಗಳನ್ನು ಮೀರಿ ಪ್ರಗತಿಯನ್ನು ಸಾಧಿಸಲಾಯಿತು. ಈ ಅಂಶವು ನಮಗೆ ಕೆಳಗಿನ ಪಟ್ಟಿಯಿಂದ ಮನವರಿಕೆಯಾಗುವುದು.

| ಆಹಾರ ಧಾನ್ಯ | ನಿರ್ಧರಿಸಿದ ಗುರಿ | ಸಾಧಿಸಿದ ಪ್ರಗತಿ |
|---|---|---|
| ೧) ಆಹಾರ ಧಾನ್ಯಗಳು | ೬೨ ದಶಲಕ್ಷ ಟನ್ | ೬೫ ದಶಲಕ್ಷಟನ್ |
| ೨) ಎಣ್ಣೆ ಬೀಜಗಳು | ೫೫ ,, | ೫೭ ,, |
| ೩) ಕಬ್ಬು | ೬೩ ,, | ೫೯ ,, |
| ೪) ಹತ್ತಿ | ೩೨ ದಶಲಕ್ಷಬೇಲ್ | ೪೦ ದಶಲಕ್ಷ ಬೇಲ್ |
| ೫) ಸೆಣಬು | ೫೪ ,, | ೪೨ ,, |

ಈ ನಿರ್ಧರಿಸಿದ ಗುರಿಗಳನ್ನು ಮುಟ್ಟಲು ಸಾಗುವಳಿಯನ್ನು ನವೀನ ರೀತಿಯಲ್ಲಿ ಮಾಡಲು ಉತ್ತಮ ಬೀಜಗಳು ರಾಸಾಯನಿಕ ಗೊಬ್ಬರಗಳು. ಯಂತ್ರೋಪಕರಣಗಳನ್ನು ಉಪಯೋಗಿಸಲು ರೈತರಿಗೆ ಉತ್ತೇಜನ ಕೊಡಲಾಯಿತು. ಔದ್ಯಮಿಕ ಕ್ಷೇತ್ರಕ್ಕೂ ಸಾಕಷ್ಟು ಗಮನವನ್ನು ಕೊಟ್ಟು ಅನೇಕ ಹೊಸ ಉದ್ದಿಮೆಗಳನ್ನು ನಿರ್ಮಿಸಲಾಯಿತು. ಸಾರ್ವಜನಿಕ ಕ್ಷೇತ್ರದಲ್ಲಿ ಯಂತ್ರೋಪಕರಣಗಳು, ಕ್ರಿಮಿನಾಶಕಗಳು, ರಾಸಾಯನಿಕ ಗೊಬ್ಬರಗಳು ಮುಂತಾದ ವಸ್ತುಗಳನ್ನು ಉತ್ಪಾದಿಸಲಾಯಿತು. ಹೊಲಿಗೆ ಯಂತ್ರ, ಅಲ್ಯೂಮಿನಿಯಂ ಲೋಹಗಳನ್ನು ಉತ್ಪಾದಿಸಲಾಯಿತು. ಖಾದಿ ಗ್ರಾಮೋದ್ಯೋಗಗಳಿಗೆ, ಕೈಮಗ್ಗದ ಉದ್ದಿಮೆಗಳ ಅಭಿವೃದ್ಧಿಗಾಗಿ ವಿಶೇಷ ಗಮನ ಕೊಡಲಾಯಿತು.

ಈ ಅವಧಿಯಲ್ಲಿ ಸಾರ್ವಜನಿಕ ಸೇವೆಗಳ ಕ್ಷೇತ್ರವನ್ನು ವಿಸ್ತರಿಸಲಾಯಿತು. ಶಿಕ್ಷಣ ಸಂಸ್ಥೆಗಳು, ತಾಂತ್ರಿಕ ಶಾಲೆಗಳು ತರಬೇತಿ ಸಂಸ್ಥೆಗಳು ಹೊಸದಾಗಿ ಪ್ರಾರಂಭಿಸಲ್ಪಟ್ಟವು. ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುವ ಜನರಿಗೆ, ನಗರವಾಸಿಗಳಿಗೆ ವೈದ್ಯಕೀಯ ಉಪಚಾರದ ಸೌಲಭ್ಯಗಳನ್ನು ಒದಗಿಸಲಾಯಿತು.

## ಸಾಧಿಸಿದ ಪ್ರಗತಿ

ಮೊದಲನೆಯ ಯೋಜನೆಯು ತಾನು ನಿರ್ಧರಿಸಿದ ಗುರಿಗಳನ್ನು ಮುಟ್ಟುವ ಪ್ರಯತ್ನದಲ್ಲಿ ಯಶಸ್ವಿಯಾಯಿತು. ಯೋಜನೆಯ ಗುರಿಗಳನ್ನು ಯೋಜನೆಯ ಅವಧಿಯು ಮುಗಿಯುವ ಮೊದಲೇ ಮುಟ್ಟಲಾಗಿತ್ತು. ಈ ಯೋಜನೆಯು

ಭಾರತದ ಜನರಿಗೆ ಹೊಸದಾದರೂ ಎಲ್ಲಾ ಕ್ಷೇತ್ರಗಳಲ್ಲೂ ಸಾಕಷ್ಟು ಪ್ರಗತಿ ಹೊಂದಿತು. ಮುಂದೆ ಈ ಯೋಜನೆಯು, ಕಾರ್ಯರೂಪಕ್ಕೆ ಬರುವ ಯೋಜನೆಗಳಿಗೆ ಸರಿಯಾದ ತಳಹದಿ ಹಾಕಿ ಕೊಟ್ಟಿತು.

೧೯೫೧–೧೯೫೬ ರ ಅವಧಿಯಲ್ಲಿ ಕೃಷಿ ಉತ್ಪಾದನೆಯು ಶೇ. ೧೯ ರಷ್ಟು ಹೆಚ್ಚಾಯಿತು. ಕೈಗಾರಿಕಾ ಉತ್ಪಾದನೆಯು ಶೇ. ೪೦ ರಷ್ಟು ಅಧಿಕಗೊಂಡಿತು. ೧೬ ದಶಲಕ್ಷ ಎಕರೆ ಭೂಮಿಗೆ ನಿರಾವರಿ ಸೌಕರ್ಯಗಳನ್ನು ಒದಗಿಸಲಾಯಿತು. ರಾಷ್ಟ್ರೀಯ ವರಮಾನವು ಶೇ. ೧೮ ರಷ್ಟು ಅಧಿಕಗೊಂಡಿತು. ತಲಾ ವರಮಾನವು ಶೇ. ೧೧ ರಷ್ಟು ಹೆಚ್ಚಾಯಿತು. ವಿದ್ಯುಚ್ಛಕ್ತಿಯ ಉತ್ಪಾದನೆ ೧.೧ ದಶಲಕ್ಷ ಕಿ. ವಾ. ನಷ್ಟು ಹೆಚ್ಚಾಯಿತು. ಆಹಾರ ಧಾನ್ಯಗಳ ಉತ್ಪಾದನೆಯು ನಿರೀಕ್ಷಿಸಿದ ಗುರಿಗಳಿಗಿಂತ ಅಧಿಕಗೊಂಡದ್ದರಿಂದ ಆಹಾರದ ಮೇಲಿನ ನಿಯಂತ್ರಣಗಳನ್ನು ತೆಗೆದು ಹಾಕಲಾಯಿತು. ಉದ್ದಿಮೆಗಳಿಂದ ಉತ್ಪಾದನೆಯು ಶೇಕಡ ೪೧ ರಷ್ಟು ಹೆಚ್ಚಾಯಿತು. ಕಾಗದ. ಸಿಮೆಂಟು ರಾಸಾಯನಿಕ ಗೊಬ್ಬರಗಳು ಮುಂತಾದ ಕ್ಷೇತ್ರಗಳಲ್ಲೂ ಪ್ರಗತಿಯನ್ನು ಸಾಧಿಸಲಾಯಿತು.

ಈ ಅವಧಿಯಲ್ಲಿ ನಿರೀಕ್ಷಿಸಿದ್ದ ಗುರಿಗಳಿಗಿಂತಲೂ ಅಧಿಕ ಪ್ರಗತಿಯನ್ನು ಪಡೆಯಲು ಮುಖ್ಯ ಕಾರಣಗಳೇನು ಎಂಬುದು ಎಲ್ಲರಿಗೂ ಹೊಳೆಯುವ ಪ್ರಶ್ನೆ. ಈ ಯೋಜನೆಯು ಯಶಸ್ವಿಯಾಗಲು ಮುಖ್ಯ ಕಾರಣಗಳೆಂದರೆ—

೧) ಯೋಜನೆಯ ಗುರಿಗಳು ಬಹಳ ಹೆಚ್ಚಾಗಿರಲಿಲ್ಲ.

೨) ಸರಿಯಾದ ಮಳೆಯಾಗಿ ಉತ್ತಮ ಬೆಳೆಯನ್ನು ಅನೇಕ ವರ್ಷಗಳ ನಂತರ ಪಡೆದುದು.

೩) ಕೊರಿಯಾ ಯುದ್ಧದಿಂದ ನಮ್ಮ ವ್ಯಾಪಾರಕ್ಕೆ ಉತ್ತೇಜನ ದೊರೆತು ವಿದೇಶಿವಿನಿಮಯ ಒದಗಿದ್ದು. ಮೇಲಾಗಿ ಈ ಅವಧಿಯಲ್ಲಿ ಕೃಷಿ ಉತ್ಪಾದನೆಗೆ ಅಡಚಣೆಯಾಗಿದ್ದ ಭೂ ಪದ್ಧತಿಯಲ್ಲಿ ಅನೇಕ ಸುಧಾರಣೆಗಳು ಜಾರಿಗೆ ಬಂದವು. ಸಹ ಕಾರಿ ಚಳವಳಿಯು ಪುನಶ್ಚೇತನಗೊಂಡಿತು. ನೀರಾವರಿ ಹಾಗೂ ವಿದ್ಯುಚ್ಛಕ್ತಿಯ ಸೌಲಭ್ಯಗಳನ್ನು ವಿಸ್ತರಿಸಿದ್ದು ಹಾಗೂ ಕೃಷಿ ಮತ್ತು ಸಣ್ಣ ಕೈಗಾರಿಕೆಗಳಿಗೆ ಸಾಲವನ್ನೊದಗಿಸುವ ವಿಶೇಷ ಸಂಸ್ಥೆಗಳನ್ನು ಸ್ಥಾಪಿಸಿದ್ದು ಬಹಳ ಮುಖ್ಯ ಕಾರಣಗಳಾಗಿ ಪರಿ ಣಮಿಸಿದವು. ಈ ಯೋಜನೆಯನ್ನು ಒಂದು ಪ್ರಯೋಗವೆಂದು ಕರೆಯಬಹುದು. ಪ್ರಥಮ ಪಂಚವಾರ್ಷಿಕ ಯೋಜನೆಯು ತನ್ನ ಈ ಪ್ರಯೋಗದಲ್ಲಿ ಭಾರಿ ಯಶಸ್ಸನ್ನು ಹೊಂದಿ ಭಾರತದ ಜನ ತೆಯು ಯೋಜನೆಗಳ ಬಗ್ಗೆ ವಿಶ್ವಾಸ, ಭರವಸೆಗಳನ್ನು ತಳೆಯು ವಂತೆ ಮಾಡಿತು. ಪ್ರಥಮ ಪಂಚವಾರ್ಷಿಕ ಯೋಜನೆಯು ೧೯೫೬ರ ಮಾರ್ಚ ತಿಂಗಳಲ್ಲಿ ಮುಕ್ತಾಯಗೊಂಡು ಸಮತಾ ಸ್ವರೂಪ ಸಮಾಜ ಸ್ಥಾಪಿಸಲು ಅಡಿಪಾಯ ಹಾಕಿ ಕೊಟ್ಟಿತು. ಈ ಯೋಜನೆಯ ಅನುಭವದಿಂದ ನಿಜವಾದ ಯೋಜನಾಭಿವೃದ್ಧಿ ಯನ್ನು ಎರಡನೆಯ ಹಾಗೂ ಮೂರನೆಯ ಯೋಜನೆಗಳಲ್ಲಿ ಕೈಕೊಳ್ಳಲು ಪ್ರಯತ್ನಿಸಲಾಯಿತು.

## ದ್ವಿತೀಯ ಪಂಚವಾರ್ಷಿಕ ಯೋಜನೆ ೧೯೬೧-೧೯೬೬

ಮೊದಲನೆಯ ಯೋಜನೆಯ ಯಶಸ್ಸಿನಿಂದ ಉತ್ಸಾಹ ಗೊಂಡ ಯೋಜಕರು ದ್ವಿತೀಯ ಯೋಜನೆಯನ್ನು ಕಾರ್ಯ ರೂಪಕ್ಕೆ ತರುವುದರಲ್ಲಿ ಹೆಚ್ಚು ಆಶಾಜೀವಿಗಳಾದರು. ಈ ಯೋಜನೆಯ ಮುಖ್ಯ ಗುರಿ ಆರ್ಥಿಕ ಸ್ವಾವಲಂಬನೆ. ಅಂದರೆ ಯಾರ ನೆರವೂ ಇಲ್ಲದೆ ನಮ್ಮ ಕಾಲ ಮೇಲೆ ನಾವು ನಿಲ್ಲುವುದು. ಇದನ್ನು ಸಾಧಿಸಲು ಸರ್ಕಾರ ಅನೇಕ ಕ್ರಮಗಳನ್ನು ಸೂಚಿಸಿದೆ. ನಮ್ಮ ಸಮಾಜದ ಮುಖ್ಯ ಗುರಿಗಳು ವಿದ್ಯಾಭ್ಯಾಸ ಮತ್ತು ಉದ್ಯೋಗಗಳಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿ ಕೊಡುವದು, ರಾಷ್ಟ್ರದ ಉತ್ಪನ್ನವನ್ನು ಅಧಿಕಗೊಳಿಸುವುದು, ವರಮಾನದ ಹಂಚಿಕೆಯಲ್ಲಿಯ ಅಸಮಾನತೆಯನ್ನು ತೊಡೆದು ಹಾಕುವದು.

ದ್ವಿತೀಯ ಯೋಜನೆಯು ಕೆಲವು ಮೂಲೋದ್ದೇಶಗಳನ್ನು ಹೊಂದಿ ೧೯೫೬ ರಲ್ಲಿ ಕಾರ್ಯರೂಪಕ್ಕೆ ಬಂದಿತು.

೧) ಜನರ ಜೀವನ ಮಟ್ಟವನ್ನು ಹೆಚ್ಚಿಸಲು ಸಹಾಯ ವಾಗುವಂತೆ ರಾಷ್ಟ್ರೀಯ ವರಮಾನವನ್ನು ಅಧಿಕ ಗೊಳಿಸುವುದು

೨) ಅತ್ಯವಶ್ಯಕವೂ ಪ್ರಮುಖವೂ ಆದ ಉದ್ದಿಮೆ ಗಳನ್ನು ಅಭಿವೃದ್ಧಿಪಡಿಸಿ ಔದ್ಯೋಗೀಕರಣವನ್ನು ಪಡೆಯುವದು.

೩) ಉದ್ಯೋಗಾವಕಾಶಗಳನ್ನು ವಿಸ್ತರಿಸುವುದು.

೪) ವರಮಾನದಲ್ಲಿ ಅಸಮಾನತೆಯನ್ನು ಕಡಿಮೆ ಮಾಡುವುದು.

ಈ ಯೋಜನೆಯು ೪೮೦೦ ಕೋಟಿ ರೂ ಗಳನ್ನು ವ್ಯಯ ಮಾಡಲು ನಿರ್ಧರಿಸಿತು ಈ ಯೋಜನೆಯಲ್ಲಿ ಹೆಚ್ಚಿನ ಪ್ರಾಶಸ್ತ್ಯ ವನ್ನು ಉದ್ದಿಮೆಗಳಿಗೆ ಕೊಡಲಾಯಿತು. ಮುಖ್ಯವಾಗಿ ಉಕ್ಕಿನ ತಯಾರಿಕೆಗೆ. ಎರಡನೆಯ ಯೋಜನೆಯು ರಾಷ್ಟ್ರದ ಅಭಿವೃದ್ಧಿ ಹೊಂದುವ ಪ್ರಯತ್ನದಲ್ಲಿ ಪ್ರಥಮ ಯೋಜನೆಯ ಮುಂದು ವರಿದ ಭಾಗವೆಂದು ಹೇಳಬಹುದು.

ಈ ಯೋಜನೆಯಲ್ಲಿ ೪೬೦೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಯಿತು.

| | | ಕೋಟಿ ರೂ. |
|---|---|---|
| ೧) | ಕೃಷಿ ಮತ್ತು ಸಾಮೂಹಿಕ ಅಭಿವೃದ್ಧಿ | ೫೩೦ |
| ೨) | ಭಾರಿ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಸೌಕರ್ಯ | ೪೨೦ |
| ೩) | ವಿದ್ಯುಚ್ಛಕ್ತಿಯ ಉತ್ಪಾದನೆ | ೪೪೫ |
| ೪) | ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆಗಳು | ೧೭೫ |
| ೫) | ಸಾರಿಗೆ ಮತ್ತು ಸಂಪರ್ಕ | ೧೩೦೦ |
| ೬) | ಕೈಗಾರಿಕೆಗಳು ಮತ್ತು ಖನಿಜಗಳು | ೯೦೦ |
| ೭) | ಸಾಮಾಜಿಕ ಸೇವೆ ಮತ್ತು ಇತರ ಬಾಬ್ತುಗಳಿಗೆ | ೮೦೦ |
| | ಒಟ್ಟು | ೪೬೦೦ ರೂ. |

| ಈ ಯೋಜನೆಯಲ್ಲಿ | ನಿರ್ಧರಿಸಿದ ಗುರಿಗಳು | ಹಾಗೂ | ಸಾಧಿಸಿದ ಪ್ರಗತಿ |
|---|---|---|---|
| ಆಹಾರ | | | |
| ಧಾನ್ಯಗಳು | ೮೦.೫ ದಶಲಕ್ಷ ಟನ್ | | ೭೬.೦ ದಶಲಕ್ಷ ಟನ್ |
| ಎಣ್ಣೆಕಾಳುಗಳು | ೮.೦ ದಶಲಕ್ಷ ಟನ್ | | ೭.೦ ,, |
| ಹತ್ತಿ | ೬.೫ ದಶಲಕ್ಷ ಬೇಲ್ | | ೫.೦ ದಶಲಕ್ಷ ಬೇಲ್ |

ಎರಡನೆಯ ಯೋಜನಾವಧಿಯಲ್ಲಿ ಆಹಾರ ಧಾನ್ಯಗಳು ಹಾಗೂ ಕಚ್ಚಾ ಪದಾರ್ಥಗಳ ಪೂರೈಕೆಯಲ್ಲಿ ಸ್ವಾವಲಂಬನೆ ಹೊಂದಲು ಪ್ರಯತ್ನಿಸಲಾಯಿತು. ಆದರೆ ಯೋಜಕರು ನಿರ್ಧರಿಸಿದ ಗುರಿಗಳನ್ನು ಮುಟ್ಟಲಾಗಲಿಲ್ಲ ಕೃಷಿ ಕ್ಷೇತ್ರದಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟಲಿಲ್ಲವಾದ್ದರಿಂದ ಆಹಾರಧಾನ್ಯಗಳ ಹಾಗೂ ಕಚ್ಚಾ ಪದಾರ್ಥಗಳ ಬೆಲೆಗಳು ಏರಲಾರಂಭಿಸಿದವು.

ಈ ಯೋಜನಾವಧಿಯಲ್ಲಿ ಹೊಸ ಉದ್ದಿಮೆಗಳು ಸ್ಥಾಪಿತಗೊಂಡವು. ವಿಮಾನನಗರ ನಿರ್ಮಾಣ, ಹಡಗು ಕಟ್ಟುವ ಉದ್ದಿಮೆ. ರೈಲ್ವೆ ವ್ಯಾಗನ್‌ಗಳ ಉತ್ಪಾದನೆ, ಡಿ. ಡಿ. ಟಿ. ಉತ್ಪಾದನೆ ಮುಂತಾದ ಹೊಸ ಉದ್ದಿಮೆಗಳು ಸ್ಥಾಪಿತವಾದವು. ಸರಕಾರಿ ರಂಗದಲ್ಲಿ ಸಿಂದ್ರಿಯಲ್ಲಿ ರಾಸಾಯನಿಕ ಗೊಬ್ಬರದ ಕಾರ್ಖಾನೆ. ಚಿತ್ತರಂಜನದಲ್ಲಿ ರೈಲ್ವೆ ಇಂಜಿನ್ನುಗಳನ್ನು ತಯಾರಿಸುವ ಕಾರ್ಖಾನೆಗಳು ಸ್ಥಾಪಿತವಾದವು. ಬೈಸಿಕಲ್ಲುಗಳು. ಹೊಲಿಗೆ ಯಂತ್ರಗಳು, ಬಟ್ಟೆ ಉದ್ದಿಮೆಗಳಲ್ಲಿ ನಿರ್ಧರಿಸಿದ

ಗುರಿಗಳನ್ನು ಮುಟ್ಟಲಾಯಿತು. ರಾಸಾಯನಿಕ ಗೊಬ್ಬರಗಳು ನ್ಯೂಸ್‌ಪ್ರಿಂಟ್ ಪೇಪರ್, ಉಕ್ಕುಗಳಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟಲಾಗಲಿಲ್ಲ.

ಎರಡನೆಯ ಯೋಜನೆಯಲ್ಲಿ ಕೃಷಿ ಉತ್ಪಾದನೆಯು ಶೇಕಡ ೧೮ ರಷ್ಟು ಅಧಿಕಗೊಂಡಿತು. ಆಹಾರ ಧಾನ್ಯಗಳ ಉತ್ಪಾದನೆಯು ೬೫ ದಶಲಕ್ಷ ಟನ್‌ಗಳಿಂದ ೭೬ ದಶಲಕ್ಷ ಟನ್‌ಗಳಿಗೇರಿತು. ಕೈಗಾರಿಕಾ ಉತ್ಪನ್ನವು ಶೇಕಡ ೫೫ ರಷ್ಟು ಹೆಚ್ಚಾಯಿತು. ಸಾಮೂಹಿಕ ಅಭಿವೃದ್ಧಿ ಹಾಗೂ ಸಹಕಾರ ಸಂಘಗಳ ಬೆಳವಣಿಗೆಯ ಕಾರ್ಯಕ್ರಮಗಳನ್ನು ವಿಸ್ತರಿಸಲಾಯಿತು. ಕೈಗಾರಿಕಾ ಕ್ಷೇತ್ರದಲ್ಲಿ ಮೂರು ಹೊಸ ಕಾರ್ಖಾನೆಗಳನ್ನು ದುರ್ಗಾಪುರ, ಭಿಲಾಯ್ ಹಾಗೂ ರೂರ್ಕೆಲಾಗಳಲ್ಲಿ ನಿರ್ಮಿಸಲಾಯಿತು.

ದ್ವಿತೀಯ ಯೋಜನೆಯ ಅಂತ್ಯದ ವೇಳೆಗೆ ರಾಷ್ಟ್ರೀಯ ವರಮಾನ ೧೨,೭೩೦ ಕೋಟಿ ರೂ. ಗಳಿಗೆ ಏರಿತು. ವೈಯಕ್ತಿಕ ವರಮಾನವು ೨೯೨ ರೂ. ಗಳಿಗೆ ಮುಟ್ಟಿತು. ಆದರೆ ಈ ವಿಭಾಗಗಳಲ್ಲಿ ನಿರೀಕ್ಷಿಸಿದ ಗುರಿಗಳನ್ನು ಸಾಧಿಸಲಾಗಲಿಲ್ಲ.

**ತೊಂದರೆಗಳು :**

ಈ ಯೋಜನೆಯು ಅನೇಕ ಎಡರು ತೊಡರುಗಳನ್ನು ಎದುರಿಸಬೇಕಾಯಿತು. ಈ ಯೋಜನೆಯಲ್ಲಿ ಹಣವನ್ನು ಹೆಚ್ಚಾಗಿ ಉದ್ದಿಮೆಗಳಲ್ಲಿ ತೊಡಗಿಸಲಾಯಿತು. ಯೋಜನೆಗೆ ಹಣವನ್ನು ಪೂರೈಸಲು ಹೊಸ ನೋಟುಗಳು ಚಲಾವಣೆಯಲ್ಲಿ

ಬಂದುದರಿಂದ ಬೆಲೆಗಳು ಏರತೊಡಗಿದವು. ವಿದೇಶಗಳಿಂದ ಯಂತ್ರೋಪಕರಣಗಳನ್ನು ಆಮದು ಮಾಡಿಕೊಳ್ಳಲಾಯಿತು. ೧೯೫೭ ರ ವೇಳೆಗೆ ವಿದೇಶಿ ವಿನಿಮಯ ಕಠಿಣವಾಯಿತು. ಜನಸಂಖ್ಯೆಯು ಬೆಳವಣಿಗೆಯು ಈ ಅವಧಿಯಲ್ಲಿ ೨.೫% ರಷ್ಟು ಹೆಚ್ಚಳ ಕಂಡಿತು. ಈ ಹೆಚ್ಚಳ ಜಗತ್ತಿನಲ್ಲಿಯೇ ಹೆಚ್ಚಿನದಾಗಿತ್ತು. ಆದುದರಿಂದ ಮುಖ್ಯ ಗುರಿಯಾದ ಸ್ವಾವಲಂಬನೆಯನ್ನು ಸಾಧಿಸಲಾಗಲಿಲ್ಲ.

## ತೃತೀಯ ಪಂಚವಾರ್ಷಿಕ ಯೋಜನೆ:

ದ್ವಿತೀಯ ಯೋಜನೆಯು ಕೆಲವು ಕ್ಷೇತ್ರಗಳಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟದೆ ೧೯೬೧ ನೇ ಮಾರ್ಚ ೩೧ ರಂದು ಅಂತ್ಯಗೊಂಡಿತು. ೧-೪-೧೯೬೧ ರಿಂದಲೇ ತೃತೀಯ ಯೋಜನೆಯು ಕಾರ್ಯರೂಪಕ್ಕೆ ಬಂದಿತು. ಆದರೆ ಈ ಯೋಜನೆಯನ್ನು ಸಿದ್ಧಪಡಿಸುವ ಕಾರ್ಯವು ೧೯೫೮ ರಿಂದಲೇ ಆರಂಭವಾಯಿತು. ೧೯೬೦ ರ ಜುಲೈ ತಿಂಗಳಿನಲ್ಲಿ ಯೋಜನೆಯ ಕರಡು ರೂಪರೇಖೆಗಳ ಪ್ರಕಟಣೆಯಾಯಿತು. ಈ ಕರಡು ರೂಪರೇಖೆಗೆ ಪಾರ್ಲಿಮೆಂಟು ೧೯೬೦ ರಲ್ಲಿ ತನ್ನ ಸಮ್ಮತಿ ನೀಡಿತು. ಯೋಜನಾ ಮಂಡಳಿಯ ಉಪಾಧ್ಯಕ್ಷರಾಗಿದ್ದ ಜಿ. ಎಲ್. ನಂದಾರವರು ೧೯೬೦ ರ ಆಗಸ್ಟ್ ೭ರಂದು ಲೋಕಸಭೆಯಲ್ಲಿ ಮಂಡಿಸಿದರು. ಈ ಯೋಜನೆಯನ್ನು ೧೯೬೧ ರ ಏಪ್ರಿಲ್‌ನಿಂದ ೧೯೬೬ ರ ಮಾರ್ಚ ವರೆಗೆ ೫ ವರ್ಷಗಳ ಅವಧಿಗಾಗಿ ಸಿದ್ಧಗೊಳಿಸಲಾಯಿತು.

ಈ ಯೋಜನೆಗೆ ಪ್ರತಿ ಹಂತದಲ್ಲಿಯೂ ರಾಜ್ಯ ಸರಕಾರಗಳ ಮತ್ತು ಕೇಂದ್ರ ಶಾಖೆಗಳ ನಿಕಟ ಸಹಾಯ ಸಹಕಾರ ದೊರೆಕಿದೆ. ಈ ಯೋಜನೆಯು ಭಾರತದಲ್ಲಿ ಹಿಂದೆಂದೂ ಆಗದಷ್ಟು ಬೃಹತ್ಪ್ರಮಾಣದಲ್ಲಿ ಅಧಿಕ ಅಭಿವೃದ್ಧಿಯನ್ನು ಸಾಧಿಸುವ ಅಭಿಲಾಷೆ ಹೊಂದಿತ್ತು. ಈ ಯೋಜನೆಯನ್ನು ಮುಂದಿನ ೧೫ ವರ್ಷಗಳ ದೀರ್ಘಾವಧಿ ಅಭಿವೃದ್ಧಿ ಕಾರ್ಯಕ್ರಮದ ಮೊದಲನೆಯ ಹೆಜ್ಜೆ ಎಂದು ಪರಿಗಣಿಸಲಾಯಿತು. ಭಾರತದ ಆರ್ಥಿಕ ವ್ಯವಸ್ಥೆಯನ್ನು ಈ ಅವಧಿಯಲ್ಲಿ ತೀವ್ರಗತಿಯಲ್ಲಿ ವಿಸ್ತರಣೆ ಹೊಂದುವಂತೆ ಮಾಡುವುದಲ್ಲದೆ ಪೂರ್ಣ ಸ್ವಾವಲಂಬನೆಯನ್ನು ಪಡೆಯುವುದು ಈ ಯೋಜನೆಯ ಉದ್ದೇಶವಾಗಿತ್ತು. ಈ ಅವಧಿಯಲ್ಲಿ ೧೧,೬೦೦ ಕೋಟಿ ರೂ. ಗಳನ್ನು ವೆಚ್ಚ ಮಾಡಲು ನಿರ್ಧರಿಸಲಾಗಿದ್ದು, ಇದರಲ್ಲಿ ೭೫೦೦ ಕೋಟಿ ರೂ. ಗಳನ್ನು ಸರಕಾರಿ ಕ್ಷೇತ್ರದಲ್ಲೂ ಮತ್ತು ೪೧೦೦ ಕೋಟಿ ರೂ. ಗಳನ್ನು ಖಾಸಗೀ ಕ್ಷೇತ್ರದಲ್ಲೂ ವ್ಯಯ ಮಾಡಲು ನಿರ್ಧರಿಸಲಾಗಿತ್ತು.

ಈ ಯೋಜನಾವಧಿಯಲ್ಲಿ ವ್ಯವಸಾಯಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಯಿತು. ಭೂ ಸುಧಾರಣೆಗಳನ್ನು ಅನುಷ್ಠಾನಕ್ಕೆ ತರಲು ಸಹಕಾರಿ ಬೇಸಾಯ ಪದ್ಧತಿಯನ್ನು ಐಚ್ಛಿಕವಾಗಿ ಕಾರ್ಯರೂಪಕ್ಕೆ ತರಲು ಸಾಕಷ್ಟು ಗಮನ ಕೊಡಲಾಯಿತು. ಇದರ ಜೊತೆಗೆ ಆರ್ಥಿಕ ಸ್ವಾವಲಂಬನೆ ಹೊಂದಲು ನೆರವಾಗುವ ಮೂಲ ಕೈಗಾರಿಕೆಗಳು, ಸಾರಿಗೆ ಸಂಪರ್ಕಗಳಿಗೂ ಪ್ರಾಮುಖ್ಯತೆ ಕೊಡಲಾಯಿತು.

ತೃತೀಯ ಯೋಜನೆಯು ಮೊದಲನೆಯ ಎರಡು ಯೋಜನೆಗಳನ್ನು ಜಾರಿಗೆ ತಂದಿದ್ದರಿಂದ ದೊರಕಿದ ಯಶಸ್ಸು ಹಾಗೂ ಅವುಗಳಲ್ಲಿ ಉಂಟಾದ ಕರ್ತವ್ಯ ಲೋಪಗಳನ್ನು ಮುಂದಿನ ೧೫ ವರ್ಷಗಳಲ್ಲಿ ಸಾಧಿಸಬೇಕಾಗಿರುವ ಅಭಿವೃದ್ಧಿ ಕಾರ್ಯಗಳನ್ನು ಪ್ರತಿಬಿಂಬಿಸುವ ದರ್ಪಣವಾಗಿದೆ. ಹೇಗೆಂದರೆ ಹಿಂದಿನ ಎರಡು ಯೋಜನೆಗಳ ಧ್ಯೇಯಗಳು ಮತ್ತು ಗುರಿಗಳೊಂದಿಗೆ. ತೃತೀಯ ಯೋಜನೆಯ ಗುರಿಗಳನ್ನು. ಧ್ಯೇಯಗಳನ್ನು ಹೋಲಿಸಿ ನೋಡಿದಾಗ ಈ ಯೋಜನೆಯು ಹಿರಿದಾಗಿರುವದು ಕಂಡು ಬರುತ್ತದೆ. ಭಾರತದ ಜನತೆಗೆ ಅತ್ಯವಶ್ಯಕವಾಗಿ ಬೇಕಾದ ಕನಿಷ್ಠ ಸೌಲಭ್ಯಗಳನ್ನು ಒದಗಿಸುವ ಗುರಿ ಹೊಂದಿರುವುದು ತೃತೀಯ ಯೋಜನೆಯ ವೈಶಿಷ್ಟ್ಯವಾಗಿದೆ. ಭಾರತ ಸರಕಾರವು ಈ ಯೋಜನಾವಧಿಯಲ್ಲಿ ೪೪ ಕೋಟಿಗಿಂತಲೂ ಹೆಚ್ಚು ಜನರನ್ನು ಪೋಷಿಸಬೇಕಾಗಿತ್ತು. ಇದೊಂದು ಮಹತ್ಕಾರ್ಯವೇ ಸರಿ. ಇದನ್ನು ಸಾಧಿಸಿದ ಕೀರ್ತಿ ತೃತೀಯ ಯೋಜನೆಯದಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಸಾಧ್ಯವಾದ ಮಟ್ಟಿಗೂ. ತ್ವರಿತ ವೇಗದಲ್ಲಿ ಅಧಿಕ ಪ್ರಮಾಣದ ರಾಷ್ಟ್ರೀಯ ಬೆಳವಣಿಗೆಯನ್ನು ಸಾಧಿಸಲು, ಆರ್ಥಿಕ ಮತ್ತು ಸಾಮಾಜಿಕ ಜೀವನದ ವ್ಯವಸ್ಥೆಗಳನ್ನು ಪುನರ್‌ನಿರ್ಮಾಣ ಮಾಡಲು ತೃತೀಯ ಯೋಜನೆಯು ಬಹುವಾಗಿ ಶ್ರಮಿಸಿತು.

**ಕಾರ್ಯಸಿದ್ಧಿ :**

ದುರದೃಷ್ಟವಶಾತ್ ಮೂರನೆಯ ಯೋಜನೆಯು ಪ್ರಾರಂಭವಾದಾಗಿನಿಂದಲೂ ದೇಶವು ಅನೇಕ ಗಂಡಾಂತರ ಪರಿ

ಸ್ಥಿತಿಗಳನ್ನು ಎದುರಿಸಬೇಕಾದ ಪ್ರಮೇಯವು ಒದಗಿ ಬಂತು. ಅಧಿಕ ಪ್ರಮಾಣದಲ್ಲಿ ಹಣವನ್ನು ರಾಷ್ಟ್ರದ ರಕ್ಷಣಾ ಕ್ರಮಗಳಿಗೆ ಉಪಯೋಗಿಸಬೇಕಾಗಿ ಬಂದಿತು. ಆದ್ದರಿಂದ ಈ ಯೋಜನೆಯಲ್ಲಿ ನಿರೀಕ್ಷಿಸಿದ್ದ ಮಟ್ಟಕ್ಕೆ ಕಾರ್ಯಸಿದ್ಧಿ ಪಡೆಯಲಾಗಲಿಲ್ಲ. ದೇಶಕ್ಕೆ ಆಹಾರದ ಸ್ವಪರಿಪೂರ್ಣತೆಯನ್ನು ಸಾಧಿಸುವ ಉದ್ದೇಶವಿದ್ದುದರಿಂದ ವ್ಯವಸಾಯ ಮತ್ತು ನೀರಾವರಿಗಾಗಿ ಸರಕಾರಿ ರಂಗದಲ್ಲಿ ೧೭೨೮ ಕೋಟಿ ರೂ. ಗಳನ್ನು ಖಾಸಗೀ ವಲಯದಲ್ಲಿ ೮೫೦ ಕೋಟಿ ರೂ. ಗಳನ್ನು ಖರ್ಚು ಮಾಡುವ ಅಂದಾಜಿದ್ದು ಈ ಅವಧಿಯಲ್ಲಿ ೨೫೬೮ ಕೋಟಿ ರೂ. ಗಳನ್ನು ವ್ಯವಸಾಯ ಮತ್ತು ನೀರಾವರಿಗಾಗಿ ವೆಚ್ಚ ಮಾಡುವ ನಿರೀಕ್ಷೆಯಿದ್ದಿತು.

ತೃತೀಯ ಯೋಜನೆಯಲ್ಲಿ ರಾಷ್ಟ್ರದ ಆದಾಯವನ್ನು ಶೇ. ೫ ರಂತೆ ಹೆಚ್ಚಿಸುವ ಗುರಿ ಇತ್ತು. ಆದರೆ ೧೯೬೬ ರ ಹೊತ್ತಿಗೆ ಆಹಾರ ಧಾನ್ಯಗಳ ಉತ್ಪಾದನೆ ಕೇವಲ ೯ ೩% ಮಾತ್ರ ಹೆಚ್ಚಾಯಿತು. ಆಹಾರ ಧಾನ್ಯಗಳ ಉತ್ಪಾದನೆಯು ೮೨ ದಶಲಕ್ಷ ಟನ್‌ಗಳಿದ್ದುದು ೧೯೬೫–೬೬ ರಲ್ಲಿ ೭೨.೩ ದಶಲಕ್ಷ ಟನ್‌ಗಳಿಗೆ ಇಳಿಯಿತು. ಈ ಯೋಜನಾವಧಿಯಲ್ಲಿ ೧೦೦ ದಶ ಲಕ್ಷ ಟನ್ ಆಹಾರ ಧಾನ್ಯಗಳನ್ನು ಬೆಳೆಯುವ ಗುರಿಯಿತ್ತು. ಆದರೆ ಸಾಧಿಸಿದ್ದು ಕೇವಲ ೮೦.೯ ದಶಲಕ್ಷ ಟನ್‌ಗಳು ಮಾತ್ರ. ಎಣ್ಣೆ ಕಾಳುಗಳ ಉತ್ಪಾದನೆ ೭.೦ ದಶಲಕ್ಷ ಟನ್‌ಗಳಿಂದ ೬.೧ ದಶಲಕ್ಷ ಟನ್‌ಗಳಿಗಿಳಿಯಿತು. ಹತ್ತಿಯ ಉತ್ಪಾದನೆ ೫.೩ ದಶಲಕ್ಷ ಬೇಲ್‌ಗಳಿಂದ ೪.೫ ದಶಲಕ್ಷ ಬೇಲ್‌ಗಳಿಗಿಳಿಯಿತು. ಕಬ್ಬಿನ ಉತ್ಪಾದನೆ ೧೧.೨ ದಶಲಕ್ಷ ಟನ್‌ಗಳಿಂದ ೧೧.೮ ದಶ

ಲಕ್ಷ ಟನ್‌ಗಳಿಗೇರಿತು. ಆದರೆ ಕೃಷಿರಂಗದ ಎಲ್ಲಾ ಭಾಗಗಳಲ್ಲೂ ಪ್ರಗತಿಯು ಅಸಮಾಧಾನಕರವಾಗಿತ್ತು. ಆದುದರಿಂದ ಭಾರತ ೨೫ ದಶಲಕ್ಷ ಟನ್ ಆಹಾರ ಧಾನ್ಯಗಳನ್ನು ೩.೯ ದಶಲಕ್ಷ ಬೇಲ್ ಹತ್ತಿಯನ್ನು ಆಮದು ಮಾಡಿಕೊಂಡಿತು. ಇದರಿಂದ ೧೧೧೦ ಕೋಟಿ ರೂ. ಗಳನ್ನು ವಿದೇಶಗಳಿಗೆ ಕೊಡಬೇಕಾದ ಪ್ರಮೇಯ ಉಂಟಾಯಿತು.

ನೀರಾವರಿಯ ಸೌಲಭ್ಯಗಳನ್ನು ೧೨.೮ ದಶಲಕ್ಷ ಎಕರೆ ಭೂಮಿಗೆ ವಿಸ್ತರಿಸುವ ಗುರಿಯಿತ್ತು. ಆದರೆ ಕೇವಲ ೫.೫ ದಶಲಕ್ಷ ಎಕರೆ ಭೂಮಿಗೆ ಮಾತ್ರ ನೀರಾವರಿಯ ಸೌಲಭ್ಯಗಳನ್ನು ಒದಗಿಸಲಾಯಿತು. ಔದ್ಯಮಿಕ ಕ್ಷೇತ್ರದಲ್ಲಿ ತೃಪ್ತಿಕರವಾದ ಪ್ರಗತಿಯನ್ನು ಸಾಧಿಸಲಾಗಲಿಲ್ಲ. ಈ ಯೋಜನೆಯಲ್ಲಿ ಕೈಗಾರಿಕೆಗಳಿಗಾಗಿ ಸರಕಾರಿ ರಂಗದಲ್ಲಿ ೧೫೨೦ ಕೋಟಿ ರೂ. ಗಳನ್ನು, ಖಾಸಗೀ ರಂಗದಲ್ಲಿ ೧೦೫೦ ಕೋಟಿ ರೂ. ಗಳನ್ನು ವ್ಯಯ ಮಾಡಲು ಅಂದಾಜು ಮಾಡಲಾಗಿತ್ತು. ಗೃಹ ಕೈಗಾರಿಕೆಗಳಿಗೆ ಹಾಗೂ ಸಣ್ಣ ಕೈಗಾರಿಕೆಗಳಿಗೆ ಸರಕಾರಿ ರಂಗದಲ್ಲಿ ೧೫೦ ಕೋಟಿ, ಖಾಸಗೀ ರಂಗದಲ್ಲಿ ೨೭೫ ಕೋಟಿಯನ್ನು ವ್ಯಯ ಮಾಡಲು ನಿರ್ಧರಿಸಿತ್ತು. ಆದಾಗ್ಯೂ ಕೈಗಾರಿಕೆಯ ಉತ್ಪಾದನೆಯು ಕಡಿಮೆಯಾಯಿತು. ೧೯೬೫ ರಲ್ಲಿ ಪಾಕಿಸ್ತಾನದೊಡನೆ ಉಂಟಾದ ಕಲಹ, ಎರಡು ವರ್ಷಗಳು ಸತತವಾಗಿ ಮಳೆ ಬಾರದೆ ಕಚ್ಚಾ ಮಾಲುಗಳ ಕೊರತೆ, ಪರರಾಷ್ಟ್ರಗಳು ಮುಖ್ಯವಾಗಿ ಅಮೇರಿಕಾ, ಬೆಲ್ಜಿಯಂ ದೇಶಗಳು ನೀಡುತ್ತಿದ್ದ ನೆರವನ್ನು ನಿಲ್ಲಿಸಿದುದು, ಅತಿ ಪ್ರಸರಣದಿಂದ ಉತ್ಪಾದನೆಯು

ವೆಚ್ಚ ಏರಿದುದು. ೧೯೬೬ ರಲ್ಲಿ ಕೈಗೊಂಡ ರೂಪಾಯಿಯ ಅಪ ಮೌಲ್ಯದಿಂದ ಕೈಗಾರಿಕಾ ಕ್ಷೇತ್ರದಲ್ಲಿ ತೃಪ್ತಿಯಾದ ಪ್ರಗತಿ ಸಾಧಿಸಲು ಸಾಧ್ಯವಾಗಲಿಲ್ಲ.

ಈ ಯೋಜನೆಯಲ್ಲಿ ನಿಗದಿ ಮಾಡಿದ ಹಣಕ್ಕಿಂತ ಹೆಚ್ಚಾಗಿ ವೆಚ್ಚ ಮಾಡಲಾಯಿತು. ಆದಾಗ್ಯೂ ಯೋಜಿತ ಗುರಿಗಳನ್ನು ಎಲ್ಲಾ ಕ್ಷೇತ್ರಗಳಲ್ಲೂ ಹೊಂದದಿದ್ದುದು ಜನರ ಮನಸ್ಸಿನ ಮೇಲೆ ತುಂಬಾ ನಿರಾಶೆಯು ಹಾಗೂ ನಿರುತ್ಸಾಹದ ಪರಿಣಾಮವನ್ನುಂಟು ಮಾಡಿತು. ಆದುದರಿಂದ ಯೋಜನೆಗಳನ್ನು ಸ್ವಲ್ಪ ಕಾಲ ನಿಲ್ಲಿಸಲು ಕೆಲವರು ಅಭಿಪ್ರಾಯಪಟ್ಟರು. ಆದಕಾರಣ ಮೂರನೆಯ ಯೋಜನೆಯ ಮುಕ್ತಾಯದ ವೇಳೆಗೆ ನಾಲ್ಕನೆಯ ಯೋಜನೆಯನ್ನು ಆರಂಭಿಸುವುದು ಅಸಾಧ್ಯವಾಯಿತು. ಪಂಚವಾರ್ಷಿಕ ಯೋಜನೆಗಳ ಬದಲು ವಾರ್ಷಿಕ ಯೋಜನೆಗಳನ್ನು ಕಾರ್ಯ ರೂಪಕ್ಕೆ ೧೯೬೬ ರಲ್ಲಿ ತರಲಾಯಿತು. ಅಂದರೆ ನಾಲ್ಕನೇ ಪಂಚವಾರ್ಷಿಕ ಯೋಜನೆಯು ಪುನಃ ಕಾರ್ಯರೂಪಕ್ಕೆ ಬರುವವರೆಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ವಾರ್ಷಿಕ ಯೋಜನೆಗಳ ಮೂಲಕ ಕಾರ್ಯಗತ ಮಾಡಲು ತೀರ್ಮಾನಿಸಿ ವಾರ್ಷಿಕ ಯೋಜನೆಗಳನ್ನು ಅನುಷ್ಠಾನಕ್ಕೆ ತರಲಾಯಿತು.

# ವಾರ್ಷಿಕ ಯೋಜನೆಗಳು

## (Annual Plans)

ತೃತೀಯ ಯೋಜನೆಯಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟಲಿಲ್ಲವಾದ್ದರಿಂದ ನಾಲ್ಕನೆಯ ಯೋಜನೆಯನ್ನು ಅತ್ಯಂತ ಹುಮ್ಮಸ್ಸಿನಿಂದ ಸ್ವಾಗತಿಸಬೇಕೆಂದಿದ್ದ ಯೋಜಕರು ಹಾಗೂ ಸಾರ್ವಜನಿಕರ ಉತ್ಸಾಹ ಜರ್ರನೆ ಇಳಿದು ಯೋಜನೆಗಳ ಬಗ್ಗೆ ಅವಿಶ್ವಾಸ ತಳೆಯುವಂತಾಯಿತು. ಲೋಕಸಭೆಯಲ್ಲಿ ಕೆಲವು ನಾಯಕರು ಮುಖ್ಯವಾಗಿ ಸ್ವತಂತ್ರ ಪಕ್ಷದ ಎಂ.ಆರ್. ಮಸಾನಿಯವರು ಯೋಜನೆಗಳಿಗೆ ಸ್ವಲ್ಪ ಕಾಲದ ಮಟ್ಟಿಗೆ ವಿರಾಮ ಕೊಡಲು ಒತ್ತಾಯಪಡಿಸಿದರು (Plan Holiday). ಆದರೆ ಒಮ್ಮೆಲೇ ರಾಷ್ಟ್ರದ ಅಭಿವೃದ್ಧಿಯ ಕಾರ್ಯಕ್ರಮವನ್ನು ನಿಲ್ಲಿಸುವ ಹಾಗಿಲ್ಲವಾದ್ದರಿಂದ ಸಧ್ಯಕ್ಕೆ ನಾಲ್ಕನೆಯ ಪಂಚವಾರ್ಷಿಕ ಯೋಜನೆಯನ್ನು ಮುಂದೂಡಿ ೧೯೬೬ ರಿಂದ ೧೯೬೯ ರ ವರೆಗೆ ವಾರ್ಷಿಕ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲಾಯಿತು.

೧೯೬೬ ರಿಂದ ೧೯೬೯ ರ ವರಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಸಾರ್ವಜನಿಕ ವಲಯದಲ್ಲಿ, ಅಭಿವೃದ್ಧಿ ಕಾರ್ಯಗಳಿಗಾಗಿ ೬೬೧೫ ಕೋಟಿ ರೂ. ಗಳನ್ನು ವೆಚ್ಚ ಮಾಡಿರುವುದೆಂದು ಅಂದಾಜು ಮಾಡಲಾಗಿದೆ. ೧೯೬೬–೬೭ ರಲ್ಲಿ ೨೧೬೪

ಕೋಟಿ ರೂ ಗಳನ್ನು, ೧೯೬೭-೬೮ ರಲ್ಲಿ ೨೦೮೯ ಕೋಟಿ ರೂ. ಗಳನ್ನು ಹಾಗೂ ೧೯೬೮ ೬೯ ರಲ್ಲಿ ೨೩೬೦ ಕೋಟಿ ರೂ. ಗಳನ್ನು ವೆಚ್ಚ ಮಾಡಲು ನಿರ್ಧರಿಸಿದ್ದಿತು. ಈ ಮೂರೂ ವರ್ಷಗಳಲ್ಲಿ ಕೃಷಿಯ ಅಭಿವೃದ್ಧಿಗಾಗಿ ೧೬೨೪ ಕೋಟಿ ರೂ. ಗಳನ್ನು ವೆಚ್ಚ ಮಾಡಲಾಯಿತು. ಪ್ರತಿ ಏಕ ವಾರ್ಷಿಕ ಯೋಜನೆಯ ಅವಧಿಯಲ್ಲಿ ರಾಷ್ಟ್ರೀಯ ವರಮಾನದಲ್ಲಿ ಶೇ.೫ ರಷ್ಟು ಹೆಚ್ಚಳ ಸಾಧಿಸುವ ಗುರಿ ಹೊಂದಿತ್ತು. ಈ ವಾರ್ಷಿಕ ಯೋಜನೆಗಳಲ್ಲಿ ಕೃಷಿಯ ಅಭಿವೃದ್ಧಿ, ವಿದ್ಯುಚ್ಛಕ್ತಿಯ ಉತ್ಪಾದನೆ, ಕೈಗಾರಿಕೆ ಹಾಗೂ ಸಾರಿಗೆ ಸಂಪರ್ಕಗಳಿಗೆ ಆದ್ಯತೆ ನೀಡಲಾಯಿತು. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ೧೪೪ ಕೋಟಿ ರೂ. ಗಳನ್ನು ವ್ಯಯ ಮಾಡಲಾಯಿತು.

ಈ ಅವಧಿಯಲ್ಲಿ ಕುಂಠಿತಗೊಂಡಿದ್ದ ಕೃಷಿ ಕ್ಷೇತ್ರವು ಚೇತರಿಸಿಕೊಂಡಿತು. ಆಹಾರ ಧಾನ್ಯಗಳ ಉತ್ಪಾದನೆಯು ೧೯೬೫-೬೬ ರಲ್ಲಿ ೭೨ ದಶಲಕ್ಷ ಟನ್‌ಗಳಿದ್ದುದು ೧೯೬೮-೬೯ ರಲ್ಲಿ ೯೮ ದಶಲಕ್ಷ ಟನ್‌ಗಳಿಗೇರಿತು. ಎಣ್ಣೆ ಕಾಳುಗಳ ಉತ್ಪಾದನೆ ೬.೪ ದಶಲಕ್ಷ ಟನ್‌ಗಳಿಂದ ೮.೫ ದಶಲಕ್ಷ ಟನ್‌ಗಳಿಗೂ ಹತ್ತಿಯ ಉತ್ಪಾದನೆ ೪.೮ ದಶಲಕ್ಷ ಬೇಲ್‌ಗಳಿಂದ ೬.೩ ದಶಲಕ್ಷ ಬೇಲ್‌ಗಳಿಗೂ ಏರಿತು. ಆದಾಗ್ಯೂ ಈ ಅವಧಿಯಲ್ಲಿ ಬೆಲೆಗಳು ಸಾಕಷ್ಟು ಏರತೊಡಗಿದವು. ಇದರಿಂದ ಮುಖ್ಯ ಸಮಸ್ಯೆಗಳಾದ ಜನಸಂಖ್ಯೆಯ ಸ್ಫೋಟನೆಯನ್ನು ತಡೆಗಟ್ಟುವಿಕೆ, ಕೃಷಿ ಕೈಗಾರಿಕೆಗಳಲ್ಲಿ ಉತ್ಪನ್ನಗಳನ್ನು ಹೆಚ್ಚಿಸುವುದರ ಮೂಲಕ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿ, ನಿರು

ದ್ಯೋಗ ಸಮಸ್ಯೆಯನ್ನು ನಿರ್ಮೂಲ ಮಾಡುವಿಕೆ ಮುಂತಾದ ಬೃಹತ್‌ಪ್ರಮಾಣದ ಕಾರ್ಯಕ್ರಮಗಳಿಗೆ ಮೂರನೆಯ ಯೋಜನೆಯಂತಹ ಹಿರಿದಾದ ಅನೇಕ ಯೋಜನೆಗಳು ಭಾರತಕ್ಕೆ ಅನಿವಾರ್ಯ ಎಂಬುದು ನಾಯಕರಿಗೆ ಮನವರಿಕೆಯಾಗಿ ಪುನಃ ನಾಲ್ಕನೆಯ ಯೋಜನೆಯನ್ನು ೧೯೬೯ ರ ಏಪ್ರಿಲ್ ತಿಂಗಳಿನಿಂದ ಕಾರ್ಯರೂಪಕ್ಕೆ ತಂದರು. ಒಟ್ಟಿನಲ್ಲಿ ನಾಲ್ಕನೆ ಪಂಚವಾರ್ಷಿಕ ಯೋಜನೆಯನ್ನು ಅನುಷ್ಠಾನಕ್ಕೆ ತರಬೇಕೆಂದು ಸಿದ್ಧಪಡಿಸಿದ್ದ ಹಲವಾರು ಕಾರ್ಯಕ್ರಮಗಳಿಗೆ ಈ ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಭದ್ರವಾದ ಅಡಿಪಾಯವನ್ನು ಹಾಕಲಾಯಿತು.

ಈಗಾಗಲೇ ಭಾರತ ಮೂರು ಪಂಚವಾರ್ಷಿಕ ಯೋಜನೆಗಳನ್ನು ಹಾಗೂ ಮೂರು ವಾರ್ಷಿಕ ಯೋಜನೆಗಳನ್ನು ಮುಕ್ತಾಯಗೊಳಿಸಿ ನಾಲ್ಕನೆಯ ಯೋಜನೆಯ ಅಂತ್ಯ ಭಾಗದಲ್ಲಿದೆ. ಈ ಯೋಜನೆಗಳ ಅವಧಿಯಲ್ಲಿ ಭಾರತ ತನ್ನ ವಿವಿಧ ಕ್ಷೇತ್ರಗಳಲ್ಲಿ ಯಾವ ಯಾವ ಕಾರ್ಯಗಳನ್ನು ಕೈಗೊಂಡಿತು, ಅದಕ್ಕಾಗಿ ಎಷ್ಟೆಷ್ಟು ಹಣವನ್ನು ವಿನಿಯೋಗಿಸಿತು, ಯಾವ ಕ್ಷೇತ್ರಗಳಲ್ಲಿ ಎಷ್ಟರಮಟ್ಟಿಗೆ ಫಲಪ್ರದವಾಯಿತು. ಯೋಜನೆಗಳು ಅನಭಿವೃದ್ಧಿ ರಾಷ್ಟ್ರವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಎಷ್ಟರಮಟ್ಟಿಗೆ ಸಹಾಯಕವಾಗಿವೆ, ಭಾರತಕ್ಕೆ ಯೋಜನೆಗಳು ಬೇಕೇ ಬೇಡವೇ ? ಅದು ಯೋಜನೆಗಳಿಲ್ಲದೆಯೇ ಮುಂದುವರಿಯುವುದು ಸಾಧ್ಯವೇ– ಇವೇ ಮುಂತಾದ ಪ್ರಶ್ನೆಗಳಿಗೆ ಈಗ ನಾವು ಅಂತ್ಯಗೊಳಿಸುವ ಯೋಜನೆಗಳ ಅಧ್ಯ

ಯುನದಿಂದ ಉತ್ತರ ದೊರೆಯುತ್ತದೆ. ಈ ಯೋಜನೆಗಳಿಂದ ನಾವು ಕಲಿತಿರುವ, ಕಲಿಯುಬೇಕಾದ ಪಾಠಗಳು ಬಹಳ ಇವೆ. ಈಗ ನಾವು ಕಳೆದ ೧೮ ವರ್ಷಗಳ ಅವಧಿಯಲ್ಲಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಮೂಲಕ ಉಂಟಾದ ಅನುಭವಗಳ ಆಧಾರದ ಮೇಲೆ ನಾವು ಕಲಿತ ಪಾಠಗಳನ್ನು ವಿವರವಾಗಿ ತಿಳಿದುಕೊಳ್ಳೋಣ. ಅದನ್ನು ವಿವರಿಸುವುದೇ ಈ ಕಿರುಹೊತ್ತಿಗೆಯ ಉದ್ದೇಶ.

# ೬. ಸಾಧನೆ ಹಾಗು ಗುರಿಗಳ ಅಂತರಗಳು

ಸರ್ವರಿಗೂ ಹೆಚ್ಚು ಸಮಾನ ಅವಕಾಶಗಳನ್ನು ಒದಗಿಸು ವುದು, ಸಂಪತ್ತು ಹಾಗೂ ವರಮಾನಗಳಲ್ಲಿನ ವೈಷಮ್ಯವನ್ನು (ತಾರತಮ್ಯ) ಕಡಿಮೆ ಮಾಡುವುದು, ಆರ್ಥಿಕ ಅಧಿಕಾರದ ಸಮಾನ ಹಂಚಿಕೆ ಹಾಗೂ ಜನತೆಗೆ ಸಮಾನ ಉದ್ಯೋಗಾವ ಕಾಶಗಳನ್ನು ಒದಗಿಸಿಕೊಡುವುದು. ಇವು ಯೋಜಕರ ಮುಖ್ಯ ಗುರಿಗಳಾಗಿದ್ದವು. ಕಳೆದ ೧೮ ವರ್ಷಗಳಿಂದಲೂ ಯೋಜಕರು ಈ ಗುರಿಗಳ ಸಾಧನೆಗಳಿಗೆ ಬೇಕಾದ ಕಾರ್ಯಕ್ರಮಗಳಿಗೆ ಯೋಜನೆಗಳಿಗೆ ಪ್ರಾಶಸ್ತ್ಯವನ್ನಿತ್ತಿದ್ದಾರೆ ಆದರೆ ನಾವು ಕಳೆದ ಮೂರು ಪಂಚವಾರ್ಷಿಕ ಯೋಜನೆಗಳ ಸಾಧನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಉದ್ಯೋಗ ಪೂರೈಕೆಯ ರಂಗ ದಲ್ಲಿ ನಾವು ವಿಫಲರಾಗಿರುವುದು ಕಂಡುಬರುತ್ತದೆ. ಏಕೆಂದರೆ ನಮ್ಮ ರಾಷ್ಟ್ರದಲ್ಲಿ ನಿರುದ್ಯೋಗ ಸಮಸ್ಯೆಯು ಬಹಳ ಉತ್ಕಟ ವಾಗಿದೆ. ವಿದ್ಯಾವಂತರೂ ಉದ್ಯೋಗಗಳಿಲ್ಲದೆ ಕಷ್ಟಪಡುತ್ತಿ ರುವ ದೃಶ್ಯ ಈಗ ಸಾಮಾನ್ಯವಾಗಿದೆ. ಉದಾಹರಣೆಗಾಗಿ, ಇಂಜಿನೀಯರುಗಳಿಗೆ, ಡಾಕ್ಟರುಗಳಿಗೆ ಸಾಕಷ್ಟು ಉದ್ಯೋಗ ಗಳು ದೊರೆಯುತ್ತಿಲ್ಲ. ವಿದ್ಯಾವಂತರಲ್ಲಿ ನಿರುದ್ಯೋಗಿಗಳಾ ದವರಿಗೆ ಕೆಲಸ ದೊರಕಿಸಬೇಕಿದ್ದರೆ ಕೇವಲ ಕೆಲಸಗಳನ್ನು ಸೃಷ್ಟಿ ಮಾಡುವುದರಿಂದ ಪ್ರಯೋಜನವಿಲ್ಲ. ಇಂಜಿನೀಯರು ಗಳ ನಿರುದ್ಯೋಗ ಸಮಸ್ಯೆಯು ಚತುರ್ಥ ಪಂಚವಾರ್ಷಿಕ

ಯೋಜನೆಯಲ್ಲಿಯೂ ಸಹ ಕೊನೆಗೊಳ್ಳಲಾರದೆಂದು ಹಿಂದಿನ ಕೇಂದ್ರ ಮಂತ್ರಿ ಶ್ರೀ ಸಂಜೀವಯ್ಯನವರು ಒಂದೆಡೆ ಸಾಂದರ್ಭಿಕವಾಗಿ ಹೇಳಿದ್ದನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬಹುದು. ಭಾರತದಲ್ಲಿ ಕೇವಲ ೨ ಕೋಟಿ ಹುದ್ದೆಗಳಿದ್ದು ೩ ಕೋಟಿ ಜನರು ನಿರುದ್ಯೋಗಿಗಳಾಗಿರುವರು. ಈ ದಿಸೆಯಲ್ಲಿ ಯೋಜಕರು ಆದಷ್ಟು ಹೆಚ್ಚಿನ ಮಟ್ಟದಲ್ಲಿ ಉದ್ಯೋಗಾವಕಾಶಗಳನ್ನು ಒದಗಿಸಲು ಪ್ರಯತ್ನಿಸುತ್ತಿದ್ದಾರೆ. ಆದಾಗ್ಯೂ ಯೋಜಿತ ಗುರಿಗಳು ಹಾಗೂ ವಾಸ್ತವಿಕ ಸಾಧನೆಗಳ ನಡುವೆ ಮಹದಂತರ ಇರುವುದು ಕಂಡುಬರುತ್ತಿದೆ.

ಕಳೆದ ಯೋಜನೆಗಳಲ್ಲಿ ಕೃಷಿ ಕ್ಷೇತ್ರದಲ್ಲಿ ಹಾಗೂ ಔದ್ಯೋಗಿಕ ಕ್ಷೇತ್ರದಲ್ಲಿ ನಿರ್ಧರಿಸಿದ ಗುರಿಗಳನ್ನು ಮುಟ್ಟಲಾಗಲಿಲ್ಲ. ಇದಕ್ಕೆ ಯೋಜನೆಗಳ ದೋಷಪೂರ್ಣ ಕಾರ್ಯಾಚರಣೆ ಹಾಗೂ ಪ್ರಕೃತಿಯ ವಿಕೋಪವು ಮುಖ್ಯ ಕಾರಣಗಳೆಂದು ಹೇಳಬಹುದು.

ದಿವಂಗತ ನೆಹರೂರವರ ಮಾತುಗಳಲ್ಲಿ ಹೇಳುವುದಾದರೆ 'ನಾವು ಯೋಜಿಸುವಲ್ಲಿ ಜಾಣರು, ಆದರೆ ಕಾರ್ಯಾಚರಣೆಯಲ್ಲಲ್ಲ'. ಅವರ ಮಾತು ನಿಜಕ್ಕೂ ವಾಸ್ತವವಾಗಿದೆ. ಉದಾಹರಣೆಗಾಗಿ ಭೂ ಸುಧಾರಣೆ (Land reforms) ಯನ್ನು ತೆಗೆದುಕೊಂಡರೆ ಅದು ತತ್ವಶಃ ಒಳ್ಳೆಯದು ಆದರೆ ಅದನ್ನು ಕಾರ್ಯಾಚರಣೆಯಲ್ಲಿ ತರುವುದರಲ್ಲಿ ಮಾತ್ರ ತಪ್ಪು ಹೆಜ್ಜೆಯನ್ನಿಟ್ಟಿದ್ದೇವೆ. ಅನೇಕ ಭೂ ಸುಧಾರಣಾ ಶಾಸನಗಳನ್ನು

ಪಾಸು ಮಾಡಿದ್ದರೂ ಸಹ ಅವು ಸರಿಯಾಗಿ ಕಾರ್ಯಗತ ಗೊಂಡಿಲ್ಲ. ರಚಿಸಿದ ಶಾಸನಗಳನ್ನು ಕಾರ್ಯಗತಗೊಳಿಸು ವುದು ಕಠಿಣ. ಆದುದರಿಂದ ಯಾವುದೇ ಕಾಯಿದೆ ಅಥವಾ ಶಾಸನ ರಚಿಸುವಾಗ ಪರಿಣಾಮಕಾರಿಯಾಗಿ ಅನುಷ್ಠಾನದಲ್ಲಿ ತರಲು ಸಾಧ್ಯವೇ ಎಂಬುದನ್ನು ವಿವೇಚಿಸಿ ರಚಿಸುವುದು ಒಳಿತು. ಇಲ್ಲವಾದಲ್ಲಿ ಕಾಯ್ದೆಯು ಕಾಗದದಲ್ಲಿ ಮಾತ್ರ ಉಳಿಯುವುದು. ಕಳೆದ ಯೋಜನೆಗಳ ಗುರಿಗಳು ಹಾಗೂ ಸಾಧನೆಗಳನ್ನು ಗಮನಿಸಿ ನೋಡಿದರೆ ನಾವು ಯೋಜನೆಗಳನ್ನು ರೂಪಿಸುವುದರಲ್ಲಿ ಮಾತ್ರ ಬುದ್ಧಿವಂತರಿದ್ದು ಅವುಗಳ ಕಾರ್ಯಾ ಚರಣೆಯಲ್ಲಿ ಹೆಡ್ಡ ದಾರಿ ತುಳಿದಿರುವುದು ಮನದಟ್ಟಾಗುತ್ತದೆ.

## ೭. ಯೋಜನೆಯಲ್ಲಿ ವ್ಯವಸ್ಥಾಪನೆಯ ಪಾತ್ರ

ವ್ಯವಸ್ಥಾಪನೆಯು ತನ್ನದೇ ಆದ ವಿಶಿಷ್ಟ ಪಾತ್ರವನ್ನು ಹೊಂದಿದ್ದರೆ ಮಾತ್ರ ಯೋಜನೆಯು ಫಲಪ್ರದವಾಗಲು ಸಾಧ್ಯ. ವ್ಯವಸ್ಥಾಪಕತ್ವ ಎಂದರೆ ದಕ್ಷವಾದ, ಬಲಿಷ್ಠವಾದ ಹಾಗೂ ಪರಿಶುದ್ಧವಾದ ಆಡಳಿತ. ಇದರಿಂದ ಯೋಜನೆಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸಬಲ್ಲವು. ಯೋಜನೆಗಳ ಯಶಸ್ಸಿಗೆ ಆಡಳಿತವು ಒಂದು ಮುಖ್ಯವಾದ ಅಂಗ. ಆದರೆ ನಮ್ಮ ಯೋಜಕರಿಗೆ ಈ ಅಂಶವು ಗಮನಕ್ಕೆ ಬಂದಿದೆಯೇ ಎಂಬುದರಲ್ಲಿ ಸಂಶಯವಿದೆ. ಆರ್ಥಿಕ ಅಭಿವೃದ್ಧಿಗೆ. ತರಬೇತು ಪಡೆದ ಮಾನವಬಲವನ್ನು ಒದಗಿಸುವುದು ಒಂದು ಮಹತ್ವದ ಅಂಶ. ಉದಾಹರಣೆಗೆ ಒಂದು ಯೋಜನೆಯನ್ನು ರಚಿಸಲು ದಕ್ಷವಾದ ಆಡಳಿತ ಅತ್ಯಾವಶ್ಯಕ. ಹಾಗೂ ಆಡಳಿತಗಾರನು ಪ್ರಾಮಾಣಿಕನಾಗಿದ್ದು, ಆಡಳಿತವನ್ನು ಜಾಗ್ರತೆಯಾಗಿ ನೋಡಿಕೊಳ್ಳಬೇಕು. ವ್ಯವಸ್ಥಾಪನೆಯಲ್ಲಿ ಏನಾದರೂ ದೋಷವಿದ್ದಲ್ಲಿ ಅದು ಒಳ್ಳೆಯ ಯೋಜನೆಯಾಗಲಾರದು. ಆದುದರಿಂದ ಸುಧಾರಿಸಿದ ಆಡಳಿತ ಪದ್ಧತಿಗಳು ದೇಶದ ತೀವ್ರತರವಾದ ಆರ್ಥಿಕಾಭಿವೃದ್ಧಿಯನ್ನು ಸಾಧಿಸಲು ಅವಶ್ಯಕವಾಗಿವೆ. ಇದನ್ನು ಒದಗಿಸಲು ಆಡಳಿತ ಸಂಸ್ಥೆಗಳು ಯೋಗ್ಯ ತರಬೇತಿಯನ್ನು ಕೊಡಬೇಕು. ಸಾರ್ವಜನಿಕ ರಂಗಗಳಲ್ಲಿ ಹಾಗೂ ಖಾಸಗೀ

ರಂಗಗಳಲ್ಲಿ ಉದ್ದಿಮೆಗಳ ಯಶಸ್ಸಿಗೆ ದಕ್ಷವಾದ ಆಡಳಿತ ಸಿಬ್ಬಂದಿಯ ನಿರ್ವಹಣೆ ಅಗತ್ಯವೆಂದು ನಾಲ್ಕನೆ ಪಂಚವಾರ್ಷಿಕ ಯೋಜನೆಯ ರೂಪರೇಷೆಯಲ್ಲಿ ಹೇಳಲಾಗಿದೆ. ಆದುದರಿಂದ ಅಹಮದಾಬಾದ ಹಾಗೂ ಕಲ್ಕತ್ತಗಳಲ್ಲಿರುವ ಆಡಳಿತ ಸಂಸ್ಥೆಗಳಲ್ಲಿನ ಸೌಲಭ್ಯಗಳನ್ನು ಹೆಚ್ಚಿಸಬೇಕಾಗುವುದು. ಒಳ್ಳೆಯ ಆಡಳಿತದೊಂದಿಗೆ ಯೋಜನೆಗಳ ಯೋಗ್ಯ ನಿರ್ವಹಣೆಯ ವಿಷಯಕ್ಕೂ ಸಹ ಹೆಚ್ಚು ಗಮನ ಕೊಡಬೇಕಾಗುತ್ತದೆ. ಆದ್ದರಿಂದ ಯೋಜನೆಯಲ್ಲಿ ದಕ್ಷ ಆಡಳಿತಕ್ಕೆ ಹೆಚ್ಚಿನ ಸ್ಥಾನವಿದೆ ಎಂಬುದು ತಿಳಿದುಬರುತ್ತದೆ

ಯೋಜನಾ ಧುರೀಣರು ಯೋಜನೆಗಳನ್ನು ರೂಪಿಸುವಾಗ ಮೊದಲಿಗೆ ತಾಲ್ಲೂಕು, ಜಿಲ್ಲೆ ಹಾಗೂ ರಾಜ್ಯಗಳ ಮಟ್ಟದಲ್ಲಿ ಯೋಜನೆಗಳನ್ನು ರೂಪಿಸಬೇಕು. ಇದರಿಂದ ಆಯಾ ಪ್ರದೇಶಗಳಲ್ಲಿರುವ ಸಮಸ್ಯೆಗಳನ್ನು ಗಣನೆಗೆ ತಂದುಕೊಂಡು ಅಲ್ಲಿನ ಸಾಧನ-ಸಂಪತ್ತುಗಳಿಗನುಸಾರವಾಗಿ ಯೋಜನೆಗಳನ್ನು ತಯಾರಿಸಿದರೆ ಅದರಿಂದ ಜನರಿಗೆ ಹಾಗೂ ರಾಷ್ಟ್ರಕ್ಕೆ ಹೆಚ್ಚು ಫಲಪ್ರದವಾಗುವುದು. ಉದಾಹರಣೆಗೆ ಬೀದರ ಜಿಲ್ಲೆ. ಈ ಜಿಲ್ಲೆಯಲ್ಲಿ ಯಾವ ನದಿಯೂ ಹರಿಯುವುದಿಲ್ಲ. ಯಾವ ಆಣೆಕಟ್ಟೂ ನಿರ್ಮಿತವಾಗಿಲ್ಲ. ಈ ಪ್ರದೇಶಗಳ ಜನರು ಕೇವಲ ವರುಣದೇವರ ಮೊರೆಹೋಗಬೇಕು. ಅದರ ಬದಲು ಲಿಫ್ಟ್ ಇರಿಗೇಷನ್‌ಗಳನ್ನು ಅನುಷ್ಠಾನಕ್ಕೆ ತಂದರೆ ಆ ಪ್ರದೇಶದ ಜನರಿಗೆ ಬಹಳ ನೆರವಾಗುವುದು.

ಯೋಜನಾ ಯಂತ್ರದಲ್ಲಿ ನುರಿತ ಹಾಗೂ ಯೋಜನಾ ವಿಭಾಗಗಳಲ್ಲಿ ತರಬೇತಿ ಪಡೆದ ಅಧಿಕಾರಿಗಳಿರಬೇಕು. ಯೋಜನಾ ಯಂತ್ರವು ಒಂದು ಪ್ರತ್ಯೇಕ ಸಂಸ್ಥೆಯಾಗಿರಬೇಕು. ರಾಜಕೀಯ ಹಾಗೂ ರಾಜಕಾರಣಿಗಳಿಂದ ದೂರವಿರಬೇಕು. ಆಗಲೇ ಅಲ್ಲಿಯ ಅಧಿಕಾರಿಗಳು ಕಾರ್ಯತತ್ಪರತೆಯಿಂದ ಸೇವಾ ಮನೋಭಾವದಿಂದ ತಮ್ಮ ಕಾರ್ಯವನ್ನು ನಿರ್ವಹಿಸುವರು.

**ಶಿಕ್ಷಣ ರಂಗ ಹಾಗೂ ಯೋಜನೆ :**

ಶಿಕ್ಷಣ ರಂಗಕ್ಕೂ ಯೋಜನೆಯ ರೂಪವನ್ನು ಕೊಟ್ಟರೆ ನಿರುದ್ಯೋಗ ಸಮಸ್ಯೆಯು ಬಹುಮಟ್ಟಿಗೆ ಸುಧಾರಿಸಬಹುದೆಂದು ಅನೇಕರು ಅಭಿಪ್ರಾಯಪಟ್ಟಿರುವುದನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬಹುದು. ಇಂದು ಉಲ್ಬಣಗೊಂಡಿರುವ ನಿರುದ್ಯೋಗ ಸಮಸ್ಯೆಯನ್ನು ಸ್ವಲ್ಪ ಮಟ್ಟಿಗಾದರೂ ತಡೆಗಟ್ಟಲು ಶಿಕ್ಷಣ ರಂಗದಲ್ಲೂ ಯೋಜನೆಯನ್ನು ಅನುಷ್ಠಾನಕ್ಕೆ ತರುವುದು ಒಳಿತು. ಹೇಗೆಂದರೆ ಇಂದಿನ ಸ್ಕೂಲು-ಶಾಲೆ ಹಾಗೂ ಕಾಲೇಜುಗಳಲ್ಲಿ ನೀಡುತ್ತಿರುವ ಶಿಕ್ಷಣ ಕೇವಲ ನೌಕರಿಯನ್ನು ಪಡೆಯುವ ಉದ್ದೇಶವನ್ನು ಹೊಂದಿದೆ. ಅಂದರೆ ಜ್ಞಾನ ಸಂಪಾದಿಸುವುದಕ್ಕಿಂತಲೂ ನೌಕರಿ ಗಳಿಸುವ (Employment) ಭಾವನೆಯು ಕಂಡು ಬರುತ್ತಿದೆ. ಆದರೆ ಇದು ಬದಲಾಗಬೇಕು. ಉದಾ- ಬಿ.ಎ. ಅಥವಾ ಬಿ.ಎಸ್ಸಿ. ಓದಿದ ವಿದ್ಯಾರ್ಥಿ ಬ್ಯಾಂಕಿನಲ್ಲೋ, ಆಫೀಸಿನಲ್ಲೋ ದುಡಿಯಲು ಬಯಸುವನು. ಇದರಲ್ಲಿ ಕೆಲವರು ಕೃಷಿಯನ್ನು ಕೈಗೊಂಡರೂ

ಆಧುನಿಕ ರೀತಿಯಲ್ಲಿ ಕೃಷಿಯನ್ನು ಕೈಗೊಳ್ಳಲಾಗುವುದಿಲ್ಲ. ಆದುದರಿಂದ ಓದು ಕೃಷಿಯ ಒಗ್ಗೆ ಇರಬೇಕು. ಆಧುನಿಕ ರೀತಿಯಲ್ಲಿ ಕೃಷಿಯನ್ನು ನಡೆಸಲು ಕೃಷಿ ಶಾಲೆಗಳು, ಕಾಲೇಜುಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿತವಾಗಬೇಕು. ಇದರಿಂದ ವಿದ್ಯಾ ಜ್ಞಾನವೂ ಆಗುವುದಲ್ಲದೆ ವಿದ್ಯೆಯು ಜ್ಞಾನವನ್ನು ಕೃಷಿರಂಗದಲ್ಲಿ ಅಳವಡಿಸಿಕೊಂಡು ಅಧಿಕ ಉತ್ಪತ್ತಿಯನ್ನು ಪಡೆದು ತಮ್ಮ ಕಾಲ ಮೇಲೆ ತಾವು ನಿಲ್ಲಬಹುದು ಹಾಗೂ ರಾಷ್ಟ್ರದ ಪ್ರಗತಿಯಲ್ಲಿ ನೆರವಾಗಬಹುದು.

**ಸಂಶೋಧನೆ** (Research)

ಸರಕಾರವು ಸಂಶೋಧನೆಗೆ ಸಾಕಷ್ಟು ಗಮನ ನೀಡಬೇಕು. ಈಗ ನಡೆಯುತ್ತಿರುವ ಸಂಶೋಧನೆ ಸಾಲದು. ವಿಶ್ವವಿದ್ಯಾನಿಲಯಗಳಲ್ಲಿ ನಡೆಯುತ್ತಿರುವ ಸಂಶೋಧನೆಯು ಕೇವಲ ಅವರ ಸ್ವಾರ್ಥ ಸಾಧನೆಗೆ ಮೀಸಲಾಗಿದೆ. ಅಂದರೆ ಅವರು ಸಂಶೋಧನೆ ಮಾಡಿ ಪ್ರಕಟಪಡಿಸಿದ ಲೇಖನಗಳಿಂದ ಅವರ ಬಡ್ತಿಗೆ, ದೊಡ್ಡ ಹುದ್ದೆಗಳಿಗೆ ನೆರವಾಗುತ್ತಿದೆಯೇ ಹೊರತು ಆ ಸಂಶೋಧನೆಯ ಫಲವು ರೈತರಿಗೆ ಲಭಿಸುತ್ತಿಲ್ಲ. ರಾಷ್ಟ್ರದ ಪ್ರಗತಿಗೆ ನೆರವಾಗುತ್ತಿಲ್ಲ. ಆದ್ದರಿಂದ ಸರಕಾರವು ವಿಜ್ಞಾನಿಗಳಿಗೆ ಪುರಸ್ಕಾರ ಕೊಟ್ಟು ಸಂಶೋಧನೆಗೆ ಹೆಚ್ಚು ಆದ್ಯತೆ ನೀಡಿ ಆದರ ಪ್ರಯೋಜನವು ರೈತರಿಗೆ ಹಾಗೂ ರಾಷ್ಟ್ರದ ಪ್ರಗತಿಗೆ ಲಭಿಸುವಂತೆ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು.

# ೮. ಗುರಿಗಳ ಗೊತ್ತುಪಾಡು

ಪ್ರಾಧ್ಯಾಪಕ ಆರ್ಥರ್ ಲೆವಿಸ್‌ರವರ ಅಭಿಪ್ರಾಯದ ಪ್ರಕಾರ ಹೇಳುವದಾದರೆ 'ಗುರಿ' (Target) ಎಂಬ ಶಬ್ದವನ್ನು ನಾವು ದುರುಪಯೋಗಮಾಡಿಕೊಂಡಿರುವೆವು. ಗುರಿಯು ನಾವು ಸಾಧಿಸುವ ವಿಷಯದ ನಿರೂಪಣೆಯಲ್ಲ. ಆದರೆ ಸೂಚಿತವಾದ ಗುರಿಯನ್ನು ನಾವು ಯಾವುದೇ ವಂಚನೆಯಿಲ್ಲದೆ ನಿರ್ಧರಿಸಬೇಕು. ಹಾಗು ಸಾಧಿಸಲು ಶ್ರಮಿಸಬೇಕು. ಒಂದು ವೇಳೆ ಗುರಿಗಳು ಆಕರ್ಷಕವಾಗಿದ್ದರೆ ಯೋಜನೆಯು ಆಕರ್ಷಕವಾಗಿ ಕಂಡು ಬರುತ್ತದೆ. ಇದರಿಂದಾಗಿ ಯೋಜಕರು ಕೇವಲ ಯೋಗ್ಯವಲ್ಲದ ಗುರಿಗಳನ್ನು ನಿರ್ಧರಿಸಿದಂತೆ ಕಂಡು ಬರುತ್ತದೆ. ಇದು ತಾಂತ್ರಿಕ ತಯಾರಿಕೆಯಲ್ಲಿ ಒಂದು ದೋಷವಾಗಿದೆ. ನಾವು ನಿರ್ಧರಿಸಿದ ಗುರಿಗಳನ್ನು ಸಾಧಿಸದೆ ಇರುವುದು ಯೋಜನೆಯ ಅವಧಿ ಮುಗಿದ ಮೇಲೆ ಗೊತ್ತಾಗುತ್ತದೆ. ಇದರಿಂದ ಜನತೆಗೆ ಯೋಜನೆಯ ಬಗ್ಗೆ ವಿಶ್ವಾಸ ಹೋಗುವುದಲ್ಲದೆ, ಯೋಜನೆಯ ಬಗ್ಗೆ ಒಂದು ರೀತಿಯ ತುಚ್ಛಭಾವನೆ ಮೂಡುವುದು. ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ (೧೯೬೧–೧೯೬೬) ಯೋಜಕರು ೯೦ ಮಿಲಿಯನ್ ಟನ್ ಆಹಾರ ಧಾನ್ಯಗಳನ್ನು ಬೆಳೆಯಲು ನಿರ್ಧರಿಸಿದ್ದರು. ಆದರೆ ೯೦ ಮಿಲಿಯನ್ ಟನ್ ಆಹಾರ ಧಾನ್ಯಗಳ ಗುರಿಯನ್ನು ಮುಟ್ಟಲಾಗಲಿಲ್ಲ. ಕಾರಣ ಮೂರನೆಯ

ಯೋಜನೆಯಲ್ಲಿ ದೇಶವು ಅನೇಕ ಸಮಸ್ಯೆಗಳನ್ನು ಎದುರಿಸ ಬೇಕಾಯಿತು. ಇದರ ಜೊತೆಗೆ ಕಾಲಕ್ಕೆ ಸರಿಯಾಗಿ ಮಳೆ ಬರಲಿಲ್ಲ. ಆದರೆ ೧೯೬೭–೬೮ರ ಹೊತ್ತಿಗೆ ಹವಾಗುಣ ಒಳ್ಳೆಯು ದಾಗಿತ್ತು. ಹೆಚ್ಚಿನ ಮಟ್ಟದಲ್ಲಿ ರಾಸಾಯನಿಕ ಗೊಬ್ಬರಗಳು, ಉತ್ತಮ ಬೀಜಗಳನ್ನು ಉಪಯೋಗಿಸಿದ್ದರಿಂದ ಸಾಕಷ್ಟು ಪ್ರಗತಿ ಕಂಡು ಬಂದಿದೆ. ಆದಾಗ್ಯೂ ಸಹ ಮೂರನೆಯ ಯೋಜನೆಯಲ್ಲಿ ಪ್ರಗತಿಯು ನಿರಾಶಾದಾಯಕವಾಗಿತ್ತು. ಈ ನಿರಾಶೆಗೆ ಮುಖ್ಯ ಕಾರಣ ಪ್ರತಿಕೂಲವಾದ ಹವಾಮಾನ ಪರಿ ಸ್ಥಿತಿ ಹಾಗೂ ಯೋಜನೆಗಳಲ್ಲಿಯ ದೋಷಗಳು ಉತ್ಪಾದನೆಯ ಮೇಲೆ ತಮ್ಮ ಪ್ರಭಾವ ಬೀರಿದುವು. ಇದರಿಂದ ಸುಮಾರು ೭೫ ಮಿಲಿಯನ್ ಟನ್‌ಗಳಷ್ಟು ಮಾತ್ರ ಆಹಾರ ಉತ್ಪಾದನೆ ಯಾಯಿತು. ಅದರಂತೆಯೇ ನೀರಾವರಿ ಯೋಜನೆಗಳನ್ನು ನಿರ್ಮಿಸುವಾಗ ನಾವು ಆ ಯೋಜನೆಗಳ ಅವಧಿಯನ್ನು ಗಮ ನಿಸಬೇಕು. ಅವಧಿಯು ಹೆಚ್ಚಾಗಿದ್ದರೆ ಆರ್ಥಿಕ ಪ್ರಗತಿಯ ಲಾಭಗಳು ಜನರಿಗೆ ದೊರೆಯುವುದಿಲ್ಲ. ಆದರೆ ನಮ್ಮ ಮುಖ್ಯ ಗುರಿ ಎಲ್ಲರಿಗೂ ಆಹಾರ ಒದಗಿಸುವುದರ ಮೂಲಕ ಬಡತನ ಮತ್ತು ಹಸಿವುಗಳನ್ನು ನಿರ್ಮೂಲಗೊಳಿಸುವುದು. ಇದಕ್ಕಾಗಿ ನಾವು ಹೆಚ್ಚು ಆಹಾರ ಧಾನ್ಯಗಳನ್ನು ಬೆಳೆಯಬೇಕು ಹಸಿರು ಕ್ರಾಂತಿಯ ಪ್ರಯೋಜನವನ್ನು ಪ್ರತಿಯೊಬ್ಬ ಭಾರತೀಯ ಪ್ರಜೆಯೂ ಅನುಭವಿಸಬೇಕು. ಇದನ್ನು ಬಗೆಹರಿಸಬೇಕಾದರೆ ನೀರಾವರಿ ಯೋಜನೆಗಳ ಅವಧಿಯು (Gestation period) ಕಡಿಮೆಯಿರಬೇಕು. ಆದ್ದರಿಂದ ದಿವಂಗತ ಪ್ರಧಾನಿಗಳಾದ

ಶ್ರೀ ಲಾಲಬಹಾದ್ದೂರ ಶಾಸ್ತ್ರಿಯವರು 'ತೀವ್ರವಾಗಿ ಫಲ' ಕೊಡುವಂತಹ ಯೋಜನೆಗಳ ಕಡೆಗೆ ಗಮನಸಿತ್ತರು (Quick yielding projects). ಅವಧಿಯು ಕಡಿಮೆಯಾಗಿದ್ದರೆ ಹಾಗು ಯೋಜನೆಯು ತೀವ್ರ ಗತಿಯಲ್ಲಿ ಮುಕ್ತಾಯಗೊಂಡರೆ ನಾವು ಅದೇ ಯೋಜನಾವಧಿಯಲ್ಲಿ ಅದರ ಫಲವನ್ನು ಕಾಣುವೆವು. ೧೯೬೩ ರಲ್ಲಿ ಯೋಜನಾ ಆಯೋಗವು ಮಧ್ಯಕಾಲೀನ ಅಂದಾಜನ್ನು (Mid-term appraisal) ಪ್ರಕಟಿಸಿತು. ಅದರಲ್ಲಿ ವಿಶೇಷತಃ ಕೃಷಿರಂಗದಲ್ಲಿ ಯೋಜನೆಗಳ ನಿರೂಪಣೆ ಹಾಗೂ ಕಾರ್ಯಾಚರಣೆಯಲ್ಲಿಯ ದೋಷಗಳನ್ನು ಪ್ರಕಟಿಸಲಾಗಿತ್ತು. ಈ ರೀತಿ ಕೃಷಿರಂಗದಲ್ಲಿ ಸಾಕಷ್ಟು ಅಭಿವೃದ್ಧಿ ಪಡೆಯದಿರಲು ಮುಖ್ಯ ಕಾರಣ, ಯೋಜಕರಾಗಲೀ ಅಥವಾ ದೇಶದ ನಾಯಕರಾಗಲೀ ಒಂದು ನೀರಾವರಿ ಯೋಜನೆಯನ್ನು ಪ್ರಾರಂಭಿಸುವಾಗ ಅದು ಎಷ್ಟು ವರ್ಷದಲ್ಲಿ ಕೊನೆಗೊಳ್ಳುವುದು, ಆ ಯೋಜನೆಗೆ ಎಷ್ಟು ಹಣ ಖರ್ಚಾಗುವುದು ಹಾಗೂ ಆ ಯೋಜನೆಯಿಂದ ಎಷ್ಟು ಎಕರೆ ಭೂಮಿಗೆ ನೀರನ್ನು ಒದಗಿಸಬಹುದು, ಎಷ್ಟು ಉತ್ಪಾದನೆ ಮಾಡಬಹುದು ಎಂಬುದನ್ನು ಚರ್ಚಿಸಿ, ಅದರಂತೆ ಪ್ರತಿಫಲ ಪಡೆಯಲು ಪ್ರಯತ್ನಿಸದೆ ಇರುವುದು. ನಮ್ಮ ದೇಶದಲ್ಲಿ ಅಪಾರವಾದ ಜಲಸಂಪತ್ತಿದೆ. ವಿದ್ಯುಚ್ಛಕ್ತಿಯನ್ನುತ್ಪಾದಿಸುವ ಅನುಕೂಲವಿದೆ, ಜನರಲ್ಲಿ ಅದನ್ನು ಉಪಯೋಗಿಸಿಕೊಳ್ಳುವ ಹುಮ್ಮಸ್ಸಿದೆ, ಆದರೆ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಾಗ ಅವುಗಳ ಉಪಯೋಗ ಎಲ್ಲರಿಗೂ ದೊರೆಯದಿರುವುದು ವಿಷಾದನೀಯ.

# ೯. ತಾಂತ್ರಿಕ ಸಂಯೋಜನೆ

ಯೋಜನೆಗಳಿಗಾಗಿ ಉಪಯೋಗಿಸುತ್ತಿರುವ ಬಂಡವಾಳವು ವ್ಯರ್ಥವಾಗದೆ ಸಾರ್ಥಕವಾಗಬೇಕು. ಅದು ರಾಷ್ಟ್ರದ ಅಭಿವೃದ್ಧಿಗಾಗಿ ಕೆಲವು ಸಾಧನೆಗಳನ್ನು ಒದಗಿಸುವಂತಹವಾಗಿರಬೇಕು. ಅಭಿವೃದ್ಧಿ ಯೋಜನೆಗಳು ಹಾಗೂ ಆರ್ಥಿಕ ಚಟುವಟಿಕೆಗಳು ಪರಸ್ಪರ ಅವಲಂಬಿತವಾದ ಅಂಶಗಳು. ಉದಾಹರಣೆಗಾಗಿ ಕೃಷಿ ಹಾಗೂ ಸಹಕಾರ, ಆರೋಗ್ಯ ಹಾಗೂ ಕುಟುಂಬ ಯೋಜನೆಗಳು ಒಂದಕ್ಕೊಂದು ಪೂರಕಗಳು. ಕೃಷಿರಂಗವು ಆಹಾರದ ಉತ್ಪತ್ತಿಯನ್ನು ಅಧಿಕಗೊಳಿಸುತ್ತದೆ. ಆಹಾರದ ಉತ್ಪತ್ತಿಯನ್ನು ಅಧಿಕಗೊಳಿಸಲು ರೈತರಿಗೆ ಅತ್ಯವಶ್ಯಕವಾಗಿ ಬೇಕಾದ ಉತ್ಪಾದನಾ ಸಾಮಗ್ರಿಗಳು, ಒಳ್ಳೆಯ ಬೀಜಗಳು, ರಾಸಾಯನಿಕ ಗೊಬ್ಬರಗಳು, ನವೀನ ಯಂತ್ರೋಪಕರಣಗಳು ಇತ್ಯಾದಿಗಳನ್ನು ಸಹಕಾರ ಸಂಘಗಳು ಒದಗಿಸಬೇಕು. ಅಂದರೆ ಕೃಷಿರಂಗದಲ್ಲಿ ಉತ್ಪತ್ತಿ ಹೆಚ್ಚಬೇಕಾದರೆ ಸಹಕಾರ ಸಂಘಗಳ ಪಾತ್ರ ತುಂಬಾ ಹಿರಿದಾದುದು ಎಂಬುದು ತಿಳಿಯುತ್ತದೆ. ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೬೯-೧೯೭೪) ಯೋಜಕರು ಉತ್ಪತ್ತಿಯ ಮಟ್ಟವನ್ನು ೯೦ ಮಿಲಿಯನ್ ಟನ್‌ಗಳಿಂದ ೧೩೦ ಮಿಲಿಯನ್ ಟನ್‌ಗಳಷ್ಟು ಹೆಚ್ಚಿಸಲು ಯೋಜನೆಯ ಕಾರ್ಯಾಚರಣೆಗೆ ಹೆಚ್ಚು ಮಹತ್ವ ಕೊಟ್ಟಿರುವರು. ಆದ್ದರಿಂದ ನಾಲ್ಕನೆಯ ಯೋಜನೆಯನ್ನು

'ಕೃಷಿ ಯೋಜನೆ' ಎಂದು ಕರೆಯಬಹುದು. ಕೃಷಿಯ ಬೆಳವಣಿಗೆಗಾಗಿ ೪೦೧೭ ಕೋಟಿ ರೂ. ಗಳನ್ನು ಈ ಯೋಜ ನಾವಧಿಯಲ್ಲಿ ವೆಚ್ಚ ಮಾಡಲಾಗುವುದು. ಆದರೆ ೧೩೦ ಮಿಲಿಯನ್ ಟನ್ ಧಾನ್ಯಗಳನ್ನು ಬೆಳೆದು ಯೋಜಕರು ನಿರ್ಧರಿಸಿರುವ ಗುರಿಗಳನ್ನು ಮುಟ್ಟುವುದು ಅಷ್ಟೇನು ಸುಲಭದ ಕೆಲಸವಲ್ಲ ಏಕೆಂದರೆ ಭಾರತದಲ್ಲಿ ಸುಮಾರು ೫೧ ಮಿಲಿಯನ್ ರೈತರು ಕೇವಲ ೧೦ ಎಕರೆ ಹಿಡುವಳಿ ಇದ್ದವರಿರುವರೆಂದು ಅಂದಾಜು ಮಾಡಲಾಗಿದೆ. ಹಾಗೂ ಸುಮಾರು ೨೧ ಮಿಲಿಯನ್ ರೈತರಿಗೆ ೨೫ ಎಕರೆಗಳಿಗೂ ಕಡಿಮೆ ಹಿಡುವಳಿ ಇರುವುದೆಂದು ತಿಳಿದು ಬಂದಿದೆ ಆದ್ದರಿಂದ ರೈತರು ಹೆಚ್ಚು ಆಹಾರ ಧಾನ್ಯ ಗಳನ್ನು ಉತ್ಪಾದಿಸಲು ಶಕ್ಯವಿಲ್ಲ. ಅವರಲ್ಲಿ ಸಾಕಷ್ಟು ಹಣ, ಉತ್ಕೃಷ್ಟ ಬೀಜಗಳು, ರಾಸಾಯನಿಕ ಗೊಬ್ಬರಗಳನ್ನು ಕೊಳ್ಳಲು ಶಕ್ತಿ ಇಲ್ಲ. ಆದಕಾರಣ ಸಹಕಾರ ಸಂಘಗಳು ಮುಂದೆ ಬಂದು ಸಣ್ಣ ರೈತರಿಗೂ ಹಣದ ಸೌಲಭ್ಯಗಳನ್ನು ಒದಗಿಸಿ, ಹೆಚ್ಚು ಇಳುವರಿ ತಳಿ ಕೊಡುವ (High yielding variety) ಬೆಳೆ ಗಳನ್ನು ಬೆಳೆಯಲು ಸಹಕರಿಸಬೇಕು. ಸಹಕಾರ ಸಂಘಗಳು ತಮ್ಮ ನಿಯಮಗಳನ್ನು ಸಡಿಲಿಸಿ ಬಲಿಷ್ಠ ವರ್ಗದವರಿಗೆ ದೊರೆ ಯುತ್ತಿರುವ ಸೌಲಭ್ಯಗಳು ಬಡ ರೈತರಿಗೂ ಸಣ್ಣ ರೈತರಿಗೂ ಸಿಗುವಂತೆ ಮಾಡಿದರೆ ಹಸಿರು ಕ್ರಾಂತಿಯ ಯೋಜನೆ ಯಶಸ್ವಿ ಯಾಗುವುದು ಹಾಗೂ ೧೩೦ ಮಿಲಿಯನ್ ಟನ್ ಆಹಾರ ಧಾನ್ಯಗಳನ್ನು ಬೆಳೆಯಲು ಸಹಾಯವಾಗುವುದು.

# ೧೦. ರಾಷ್ಟ್ರದ ಬೆಳವಣಿಗೆಯಲ್ಲಿ ಖಾಸಗೀ ಕ್ಷೇತ್ರದ ಅವಶ್ಯಕತೆ

ಭಾರತವು ಮಿಶ್ರ ಆರ್ಥಿಕ ಪದ್ಧತಿಯನ್ನು (Mixed Economy) ಅನುಸರಿಸುವ ದೇಶ. ಒಂದೇ ಕಾಲದಲ್ಲಿ ಸರಕಾರಿ ರಂಗಗಳು ಮತ್ತು ಖಾಸಗೀ ರಂಗಗಳು ನೇಮಿತವಾದ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುವ ಪದ್ಧತಿಗೆ ಮಿಶ್ರ ಆರ್ಥಿಕ ಪದ್ಧತಿ ಎನ್ನುವರು. ಭಾರತದ ಅರ್ಥ ವ್ಯವಸ್ಥೆಯಲ್ಲಿ ಖಾಸಗೀ ರಂಗವು ಮಹತ್ವದ ಪಾತ್ರ ವಹಿಸುತ್ತಿದ್ದು, ಸಾರ್ವಜನಿಕ ರಂಗಕ್ಕೆ ಪೂರಕವಾಗಿದೆ ೧೯೫೬ ರ ಕೈಗಾರಿಕಾ ಧೋರಣೆಯ ಮೇರೆಗೆ, ಕೈಗಾರಿಕೆಗಳ ಅಭಿವೃದ್ಧಿಯಲ್ಲಿಯೂ ಸಹ ಎರಡು ರಂಗಗಳು ಮಹತ್ವದ ಪಾತ್ರ ವಹಿಸುತ್ತಿವೆ. ಈ ಎರಡೂ ರಂಗಗಳು ಸೋದರಭಾವದಿಂದ ಸೌಹಾರ್ದತೆಯಿಂದ ವರ್ತಿಸುತ್ತವೆ. ಅವು ಒಂದಕ್ಕೊಂದು ಸ್ಪರ್ಧಾತ್ಮಕವಾಗಿರುವುದಿಲ್ಲ. ಆದರೆ ಅವು ಒಂದಕ್ಕೊಂದು ಪೂರಕಗಳಾಗಿವೆ.

ನಾಲ್ಕನೆಯ ಯೋಜನೆಯಲ್ಲಿ ಒಟ್ಟು ೨೪.೩೯೮ ಕೋಟಿ ರೂ. ಗಳನ್ನು ವೆಚ್ಚ ಮಾಡಲು ನಿರ್ಧರಿಸಿದ್ದು ಖಾಸಗೀ ಕ್ಷೇತ್ರವು ೧೦,೦೦೦ ಕೋಟಿ ರೂ. ಗಳನ್ನು ಒದಗಿಸಲು ಮುಂದೆ ಬಂದಿದೆ. ಇದರಿಂದ ತಿಳಿದುಬರುವ ಅಂಶವೆಂದರೆ ಖಾಸಗೀ ರಂಗವೂ ಸಹ

ಆರ್ಥಿಕ ಅಭಿವೃದ್ಧಿಯಲ್ಲಿ ತನ್ನ ಪಾತ್ರವನ್ನು ವಹಿಸುತ್ತಿದೆ ಎಂಬುದು.

ವರದಿ ಒಪ್ಪಿಸುವುದು :

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಗಮನಿಸಿದರೆ ನಮಗೆ ಭಾಸವಾಗುವ ಅಂಶ, ಯೋಜನಾ ಆಯೋಗವು ತನ್ನ ಕರ್ತವ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುತ್ತಿಲ್ಲವೆಂಬುದು. ಯೋಜನಾ ಆಯೋಗವು ಹೆಚ್ಚು ಸುಧಾರಿಸಬೇಕಾಗಿದೆ. ಅದರ ಕರ್ತವ್ಯದಕ್ಷತೆಯು ಹೆಚ್ಚಬೇಕಾಗಿದೆ. ಅಂದರೆ ಯೋಜನಾ ಆಯೋಗವು ಯೋಜನೆಯ ಪ್ರಗತಿಯ ಬಗ್ಗೆ ಮಾಹಿತಿಯನ್ನು ಕೊಡಬೇಕು. ವರದಿಗಳ ರಚನೆ ಮತ್ತು ಯೋಜನೆಗಳ ಸಾಧನೆಯನ್ನು ಮೊದಲೇ ಬೆಲೆ ಕಟ್ಟಿ ಜನತೆಯ ಮುಂದಿಡಬೇಕು. ಕೆಳಮಟ್ಟದಲ್ಲಿ ವರದಿಗಳನ್ನು ಸರಿಯಾದ ತಳಹದಿಯ ಮೇಲೆ ರೂಪಿಸಬೇಕು. ವರದಿಗಳನ್ನು ಸರಿಯಾಗಿ ಒಪ್ಪಿಸಿದರೆ. ಹಿಂದಿನ ಯೋಜನೆಗಳ ಅನುಭವದಿಂದ ನಮ್ಮ ಸಮಸ್ಯೆಗಳನ್ನು ಅರಿತು ಮುಂದಿನ ಯೋಜನೆಗಳಲ್ಲಿ ಆ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಹುಡುಕಬಹುದು. ಇದರಿಂದ ಮುಂದೆ ಮತ್ತೆ ಮತ್ತೆ ಎಡವಿ ಬೀಳುವುದು ತಪ್ಪುತ್ತದೆ. ಇಲ್ಲದಿದ್ದರೆ ಸಮಸ್ಯೆಗಳ ಮೇಲೆ ಸಮಸ್ಯೆಗಳು ಒದಗಿ ಬಂದು ಬಿಡಿಸಲಾರದ ಜಟಿಲ ಸಮಸ್ಯೆಗಳನ್ನು ಎದುರಿಸಬೇಕಾಗುವುದು. ಇದರಿಂದ ಆರ್ಥಿಕಾಭಿವೃದ್ಧಿ ಕುಂಠಿತಗೊಳ್ಳುವುದು. ಆದ್ದರಿಂದ ಯೋಜನಾ ಆಯೋಗವು ಸರಿಯಾದ

ವರದಿ ಒಪ್ಪಿಸಬೇಕಾದ್ದು ಬಹಳ ಮುಖ್ಯವಾದ ಅಂಶ. ಇದರಿಂದ ಯೋಜನೆಯ ಸಂಘಟನೆಯನ್ನು ಎಲ್ಲಾ ಹಂತಗಳಲ್ಲಿ ಬಲಗೊಳಿಸಲು ಹಾಗೂ ಸೂಕ್ತವಾದ ದಿಟ್ಟ ಕ್ರಮಗಳನ್ನು ಕೈಗೊಳ್ಳಲು ಅನುಕೂಲವಾಗುತ್ತದೆ.

ರೀತಿ ಒಳ್ಳೆಯ ಫಲವನ್ನು ಕೊಡುತ್ತದೆಯೋ ಅದೇ ರೀತಿ ಯೋಜನೆಯನ್ನು ಅನುಷ್ಠಾನಕ್ಕೆ ತರುವಾಗ ಪ್ರಾರಂಭದಲ್ಲಿಯೇ ಉತ್ತಮವಾದ ಅಡಿಪಾಯವನ್ನು ಹಾಕಿ ಯೋಗ್ಯ ಗುರಿಗಳನ್ನಿಟ್ಟುಕೊಂಡು ಅವುಗಳ ಸಾಧನೆಗಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರೆ ನಮ್ಮ ಯೋಜನೆಗಳು ಸುಮಧುರ ಫಲಗಳನ್ನು ಕೊಡುವುದರಲ್ಲಿ ಸಂಶಯವಿಲ್ಲ. ಪ್ರಾಧ್ಯಾಪಕ ಆರ್ಥರ್ ಲೆವಿಸ್ ರವರು "ಯೋಜನೆಯ ಗುಣ ಹಾಗೂ ಯಶಸ್ಸುಗಳನ್ನು ನಿಯಂತ್ರಣ ಹಾಗೂ ಬೆಲೆಗಳ ಮೂಲಕ ನಿರ್ಧರಿಸಲಾಗುವದಿಲ್ಲ. ಆದರೆ ಕೊರತೆಗಳನ್ನು ತೀವ್ರಗತಿಯಿಂದ ತುಂಬುವಷ್ಟೇ ಪರಿಣಾಮಕಾರಿಯಾಗಿ ಕ್ರಮಗಳನ್ನು ನಿರ್ಧರಿಸಬೇಕು" ಎಂಬುದಾಗಿ ಹೇಳಿದ್ದಾರೆ.

ಯೋಜನೆಯ ಹಲವಾರು ಗುರಿಗಳಲ್ಲಿ ಆರ್ಥಿಕ ಸ್ವಾವಲಂಬನೆಯ ಗುರಿ ಮಹತ್ವದ್ದಾಗಿದೆ. ಮೂರನೆಯ ಯೋಜನೆಯಲ್ಲಿ ಆರ್ಥಿಕ ಸ್ವಾವಲಂಬನೆ ಹೊಂದಲು ಕೃಷಿಗೆ ಆದ್ಯತೆ ನೀಡಲಾಗಿದೆ. ನಾಲ್ಕನೆಯ ಯೋಜನೆಯ ಅಂತ್ಯದ ವೇಳೆಗೆ ಸ್ವಾವಲಂಬನೆಯನ್ನು ಪಡೆಯುವ ಗುರಿ ಇದೆ. ಈ ಉದ್ದೇಶದಿಂದ ಸರಕಾರವು ಪಡಿತರ ಪದ್ಧತಿ, ಸರಕಾರಿ ವ್ಯಾಪಾರ, ಕೃಷಿ ಉತ್ಪನ್ನ ಬೆಲೆಗಳ ಆಯೋಗ ಮುಂತಾದ ಕ್ರಮಗಳನ್ನು ಕೈಕೊಂಡಿದ್ದರೂ ಆಹಾರದ ಸಮಸ್ಯೆಯನ್ನು ಇದುವರೆಗೂ ಬಿಡಿಸಲಾಗಿಲ್ಲ. ಆದ್ದರಿಂದ ಸಾಕಷ್ಟು ಚರ್ಚೆ ಹಾಗೂ ನಿಯಂತ್ರಣಗಳ ಮೂಲಕ ನಾವು ಭವಿಷ್ಯ ಯೋಜನೆಗಳನ್ನು ರೂಪಿಸಬೇಕು. ಈ ರೀತಿಯನ್ನು ಅನುಸರಿಸಿದರೆ ಯಶಸ್ಸನ್ನು ಸಾಧಿಸಬಹುದು.

ಇಂದು ನಮ್ಮ ದೇಶದಲ್ಲಿ ಹಸಿವು ಮತ್ತು ಬಡತನಗಳು ಎಷ್ಟು ಆಳವಾಗಿ ಬೇರೂರಿಬಿಟ್ಟಿವೆಯೆಂದರೆ ಅವುಗಳ ಉಚ್ಚಾಟನೆ (ನಿರ್ಮೂಲನೆ) ಯನ್ನು ಮಾಡುವುದು ಎಂದೆಂದಿಗೂ ಸಾಧ್ಯವೇ ಇಲ್ಲವೇನೋ ಎಂಬ ಸಂಶಯ ಬರುತ್ತದೆ ಇವೆರಡೂ ಭಾರತದ ಜನತೆಯನ್ನು ಕಿತ್ತು ತಿನ್ನುತ್ತಿವೆ. ಇವುಗಳ ಜೊತೆಗೆ ನಮ್ಮನ್ನು ಕಾಡುತ್ತಿರುವ ಮತ್ತೆರಡು ಜಟಿಲವಾದ ಸಮಸ್ಯೆಗಳೆಂದರೆ ನಿರುದ್ಯೋಗ ಮತ್ತು ಅತಿ ಜನಸಂಖ್ಯೆ. ಜನಸಂಖ್ಯೆಯನ್ನು ನಿಯಂತ್ರಿಸಲು ನಾಲ್ಕನೆಯ ಯೋಜನಾವಧಿಯಲ್ಲಿ ೩೦೦ ಕೋಟಿ ರೂ.ಗಳನ್ನು ಕುಟುಂಬ ನಿಯಂತ್ರಣ ಕಾರ್ಯಕ್ರಮಗಳಿಗಾಗಿ ಮೀಸಲಿಟ್ಟಿದೆ. ಪ್ರತಿಯೊಂದು ಯೋಜನೆಯಲ್ಲಿಯೂ ನಿರುದ್ಯೋಗದ ಹಾಗು ಜನಸಂಖ್ಯೆಯ ಪ್ರಮಾಣವು ಹೆಚ್ಚುತ್ತಲೇ ಇದೆ. ಆಧುನಿಕ ಕೈಗಾರಿಕೆಗಳನ್ನು ಸ್ಥಾಪಿಸಿದರೆ ಹೆಚ್ಚು ಮಂದಿಗೆ ಉದ್ಯೋಗಗಳು ಸಿಗುವುದಿಲ್ಲ. ಏಕೆಂದರೆ ನೂತನ ಯಂತ್ರಗಳು ಹೆಚ್ಚು ಜನರನ್ನು ನೇಮಿಸಿಕೊಳ್ಳಲು ಅವಕಾಶ ಕೊಡುವುದಿಲ್ಲ. ಅದೂ ಅಲ್ಲದೆ ಗ್ರಾಮಾಂತರ ಪ್ರದೇಶಗಳಲ್ಲಿ ನೀರಾವರಿಯ ಸೌಲಭ್ಯಗಳಿಲ್ಲದಿರುವುದರಿಂದ ಕೃಷಿಯೂ ಸಹ ಪೂರ್ಣ ಕಾಲದ ಉದ್ಯೋಗಗಳನ್ನು ಒದಗಿಸುತ್ತಿಲ್ಲ. ಹಸಿವು. ಬಡತನ ಮತ್ತು ನಿರುದ್ಯೋಗ ಈ ಮೂರೂ ಸಮಸ್ಯೆಗಳಿಗೆ ಮುಖ್ಯ ಕಾರಣ ಭಾರತದ ಅತಿ ಜನಸಂಖ್ಯೆಯೇ ಎಂಬುದು ಪ್ರತಿಯೊಬ್ಬರೂ ಅರಿತಿರುವ ಅಂಶ. ಮೇಲಿನ ಮೂರು ಸಮಸ್ಯೆಗಳೂ ನಿವಾರಣೆಯಾಗಬೇಕಾದರೆ ಮೊದಲು ನಮ್ಮ ಭೀಕರ ಶತ್ರುವಿನಂತಿದ್ದು. ದಿನೇ ದಿನೇ ತ್ವರಿತ ವೇಗದಲ್ಲಿ ಅಧಿಕ

ಗೊಳ್ಳುತ್ತಿರುವ ಜನಸಂಖ್ಯೆಯನ್ನು ತಡೆಗಟ್ಟಬೇಕು. ಈ ಸಮಸ್ಯೆಗಳನ್ನು ಪೂರ್ಣವಾಗಿ ತೊಲಗಿಸಲು ಸಾಧ್ಯವಿಲ್ಲವಾದರೂ ಸ್ವಲ್ಪಮಟ್ಟಿಗಾದರೂ ಇವುಗಳ ನಿವಾರಣೆಯನ್ನು ಮಾಡುವುದು ಸಾಧ್ಯವಿದೆ. ಈ ನಮ್ಮ ಆಸೆ ಕೈಗೂಡಬೇಕಾದರೆ ಅದಕ್ಕಿರುವ ಹೆದ್ದಾರಿ ಯೋಜನೆಯೊಂದೇ. ಆದ್ದರಿಂದ ರಾಷ್ಟ್ರೀಯ ಯೋಜನೆಯನ್ನು ರೂಪಿಸುವಾಗ ಹಿಂದಿನ ಸಾಧನೆಗಳು ಹಾಗೂ ವೈಫಲ್ಯಗಳನ್ನು ಅರಿತುಕೊಳ್ಳಬೇಕು. ಆಗ ನಿರ್ಧರಿಸಿದ ಗುರಿಗಳನ್ನು ತಲುಪಲು ಸಾಧ್ಯವಾಗುವುದು. ಇದಕ್ಕೆ ದಕ್ಷವಾದ ಆಡಳಿತ ಅವಶ್ಯಕ ಆಡಳಿತವು ಸ್ಥಳೀಯ ಮಟ್ಟದಲ್ಲಿಯೂ ಹಾಗೂ ಮೇಲಿನ ಮಟ್ಟದಲ್ಲಿಯೂ ದಕ್ಷವಾಗಿರಬೇಕು. ಯೋಜಕರು ಹಾಗೂ ಜನತೆಯ ನಡುವೆ ಸಾಕಷ್ಟು ಸಹಕಾರವಿರಬೇಕು. ಆಗ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಯೋಜನೆಯ ಬಗ್ಗೆ ವಿಶ್ವಾಸ ಬೆಳೆಯುತ್ತದೆ. ಇದರಿಂದ ಆರ್ಥಿಕ ಅನಿಷ್ಟಗಳಿಗೆ ಪರಿಹಾರೋಪಾಯವಾದ ಯೋಜನೆಯು ರಾಮಬಾಣವಾಗಿ ಪರಿಣಮಿಸುತ್ತದೆ. ಯೋಜನೆ ದೀನದಲಿತರಿಗೆ ಒಂದು ಆಶಾಕಿರಣವಿದ್ದಂತೆ. ಜನರು ತೆರಿಗೆಗಳ ಮೂಲಕ ಸರಕಾರಕ್ಕೆ ಕೊಡುವ ಹಣವು ತಮ್ಮ ಕಲ್ಯಾಣ (Welfare) ಕ್ಕಾಗಿ ವ್ಯಯವಾಗುತ್ತಿದೆ ಎಂಬುದನ್ನು ತಿಳಿಯಬೇಕು. ಇದನ್ನು ಜನತೆಯು ತಿಳಿದರೆ ಯೋಜನೆಗಳು ಯಶಸ್ವಿಯಾಗುವುವು ಈ ಸಲಹೆಯನ್ನು ಕಾರ್ಯರೂಪಕ್ಕೆ ತರುವುದು ಕಠಿಣ; ಆದರೆ ಶ್ರಮವಹಿಸಿದರೆ ಮಾತ್ರ ಭಾರತದ ಭವಿಷ್ಯದ ಬಗ್ಗೆ ಜನತೆ ಆಶಾಭಾವನೆ ತಳೆಯುವುದರಲ್ಲಿ ಸಂಶಯವಿಲ್ಲ ಆಗ ನಮ್ಮ ಯೋಜನೆಗಳು ನಿಜಕ್ಕೂ ರಾಷ್ಟ್ರದ ಆರ್ಥಿಕ ಅಭಿ

ವೃದ್ಧಿಯು ಫಲಗಳನ್ನೀಯುವುವು. ಆದರೆ ಇಂದು ದೇಶದಲ್ಲಿ ಎಲ್ಲೆಲ್ಲೂ ಸ್ವಾರ್ಥ, ದಬ್ಬಾಳಿಕೆ, ಅಧಿಕಾರ ಲಾಲಸೆ, ಮೋಸ, ಅಕ್ರಮ ವ್ಯವಹಾರ, ಅನಾಚಾರಗಳು ಹೆಚ್ಚಾಗಿವೆ. ಮಾನವತೆ ನಶಿಸುತ್ತಿದೆ. ನಮ್ಮ ರಾಷ್ಟ್ರ ಅಭಿವೃದ್ಧಿಗೊಳ್ಳಬೇಕಾದರೆ ಜನರಲ್ಲಿ ನಾನು, ನನ್ನದು ಅನ್ನುವ ಮನೋಭಾವ ಹೋಗಿ ನಿಸ್ವಾರ್ಥ ಸೇವೆಯ ಭಾವನೆ ತಲೆದೋರಬೇಕು. ಅವರಲ್ಲಿ ರಾಷ್ಟ್ರಪ್ರೇಮ ಉಕ್ಕಿ ಹರಿಯಬೇಕು. ರಾಷ್ಟ್ರ ಯಾರೊಬ್ಬನ ಸೊತ್ತು (Property) ಅಲ್ಲ. ಅದು ಎಲ್ಲರ ಆಸ್ತಿ. ಅದರ ಕಷ್ಟ, ಸುಖಗಳು ಎಲ್ಲರಿಗೂ ಸೇರಿದ್ದು. ಭಾರತಮಾತೆ ಎಲ್ಲರ ತಾಯಿ. ಆ ಮಾತೆಯ ಮನಸ್ಸಿಗೆ ನೋವಾಗದಂತೆ ನೋಡಿ ಕೊಳ್ಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ಈ ಕರ್ತವ್ಯ ಪ್ರಜ್ಞೆ ಭಾರತದ ಜನರೆಲ್ಲರಲ್ಲೂ ಮೂಡಿದರೆ ನಮ್ಮ ಯೋಜನೆಗಳು ಯಶಸ್ವಿಯಾಗಿ ನಮ್ಮ ರಾಷ್ಟ್ರ ಅಭಿವೃದ್ಧಿಗೊಳ್ಳಲು ಸಾಧ್ಯವಾಗುವುದು. ಇಂದು ಇತರ ದೇಶಗಳು ಭಾರತಕ್ಕಿಂತಲೂ ಹೆಚ್ಚು ಮುಂದುವರಿದಿರುವು ದಕ್ಕೆ ಕಾರಣ ಅಲ್ಲಿಯ ಜನರ ರಾಷ್ಟ್ರಪ್ರೇಮ, ಒಗ್ಗಟ್ಟು ಗಳೇ ಎಂದು ಹೇಳಬಹುದು. ಒಗ್ಗಟ್ಟಿನಿಂದಲೇ ಬಲ, ಒಗ್ಗಟ್ಟಿನಿಂದಲೇ ಕಾರ್ಯಸಿದ್ಧಿ. ಆದ್ದರಿಂದ ನಮ್ಮ ದೇಶದ ಜನ ರೆಲ್ಲರೂ ಭಾರತದ ಯಶಸ್ಸಿಗೆ ಪ್ರಗತಿಗೆ ಕಂಕಣಬದ್ಧರಾಗಿ ನಿಂತು ಶ್ರಮವಹಿಸಿ, ದಕ್ಷತೆಯಿಂದ ಪ್ರಾಮಾಣಿಕತೆಯಿಂದ ಕೆಲಸ ಗಳನ್ನು ನಿರ್ವಹಿಸಿದರೆ ನಿಜಕ್ಕೂ ಯೋಜನೆಗಳು ಫಲಪ್ರದವಾಗಿ ನಮ್ಮ ಭಾರತ ರಾಮರಾಜ್ಯವಾಗುವುದರಲ್ಲಿ ಸಂದೇಹವೇ ಇಲ್ಲ.

---

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು



| | |
|---|---|
| ಬೆಲೆ ಏರಿಕೆಯ ಸಮಸ್ಯೆ | —ಆರ್. ವ್ಹಿ. ದಾಡೀಭಾವಿ |
| ವಿದ್ಯಾವಂತ ಯುವಕರಿಗೆ ಉದ್ಯೋಗಾವಕಾಶಗಳು | —ಆರ್. ಬಿ. ವನಹಳ್ಳಿ |
| ಗಾಳಿಗಳು | —ಸಂಗಮೇಶ ನರೇಗಲ್ಲ |
| ಹಿಂದೂ ವಿವಾಹ ಪದ್ಧತಿ | —ಎಚ್. ಬಿ. ಮಾಳಿ |
| ಈಶ್ವರ ಮತ್ತು ಅನಿಷ್ಟ | —ಎನ್. ಜಿ. ಮಹಾದೇವಪ್ಪ |
| ಮೂಲವ್ಯಾಧಿ | —ಸ. ಜ. ನಾಗಲೋಟಿಮಠ |
| ಜಗದ್ವಿಖ್ಯಾತ ಭಾರತೀಯ ವಿಜ್ಞಾನಿಗಳು | –ಗೋಪಾಲ ಆಶ್ರೀತ |
| ಕನ್ನಡ ರಾಜ್ಯ ರಮಾರಮಣ ಕೃಷ್ಣದೇವರಾಯ | —ಡಿ. ಟಿ. ಜೋಶಿ |
| ಸ್ತ್ರೀ ನಡೆದು ಬಂದ ದಾರಿ | —ಸರೋಜಿನಿ ಶಿಂತ್ರಿ |
| ಸರೋಜಿನಿ ನಾಯ್ಡು | —ಎಲ್. ಸಿ. ಪಾಟೀಲ |

ಪ್ರಸಾರಾಂಗ ವಿಸ್ತರಣ ಹಾಗು ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೩